**ಸರ್ಕಾರದ ಆದೇಶ ಸಂಖ್ಯೆ: ಇಎನ್ 278 ಎನ್‌ಸಿಇ 2007, ಬೆಂಗಳೂರು, ದಿನಾಂಕ: 20.01.2010.**

ಮೆ॥ ಆರ್.ಎಸ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕರ್‌ಂಬರ್ ಗ್ರಾಮದ ಬಳಿ ಪಲ್ಗುಣಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-**Latitude:**$13^0$32'27'' & **Longitude:** $75^0$15'32'' and Power House-**Latitude:**$13^0$32'18'' **Longitude:** $70^0$15'26'') ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.
(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
(ಇ) ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.
(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು
(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 219

**(ಎಸ್.ಜಿ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಆರ್.ಎಸ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕ್ರೆಡಲ್/06/ಕದರಿ/2007/1828 ದಿನಾಂಕ 21.5.2007/16.8.2007.
**2.** ದಿನಾಂಕ 13.2.2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಆರ್.ಎಸ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಕದರಿ ಗ್ರಾಮದ ಬಳಿ ಮಚಿಟ್ಟೆ ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 13.2.2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಆರ್.ಎಸ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 286 ಎನ್‌ಸಿಇ 2007, ಬೆಂಗಳೂರು, ದಿನಾಂಕ: 20.01.2010.**

ಮೆ॥ ಆರ್.ಎಸ್.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಕದರಿ ಗ್ರಾಮದ ಬಳಿ ಮಚಿಟ್ಟೆ ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-**Latitude:**13$^0$26'00'' & Weir-**Longitude:** 75$^0$54'13'') ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮುನ್ನ ಎಲ್ಲಾ ದಸ್ತಾವೇಜುಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸತಕ್ಕದ್ದು.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 220

**(ಎಸ್.ಜಿ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ.ಕೆ. ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಖಾನಾಪುರರವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಯ ಮಂಡನಾಧಿಕಾರಿಯ ಬದಲಾವಣೆ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ ಒಇ/490 ಪಿಪಿಇ 2007, ದಿನಾಂಕ 09–03–2009.

2. ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ ಲಾ 7 ಜದಿವಿ 2009, ದಿನಾಂಕ 23–11–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 09–03–2009ರ ಸರ್ಕಾರದ ಆದೇಶದಲ್ಲಿ ಶ್ರೀ ಎ.ಕೆ. ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಖಾನಾಪುರರವರ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡುವ ಕುರಿತ ಪ್ರಕರಣದ ವಿಚಾರಣೆಯಲ್ಲಿ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಶ್ರೀ ಜಿ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಕಾನೂನು ಇಲಾಖೆಯ ದಿನಾಂಕ 23.11.2009ರ ಟಿಪ್ಪಣಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಯನ್ವಯ ಶ್ರೀ ಜಿ.ಎ. ಮೂಲಿಮನಿರವರು ವರ್ಗಾವಣೆಗೊಂಡಿರುವುದರಿಂದ ಕಾನೂನು ಇಲಾಖೆಯ ಮತ್ತೊಬ್ಬ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ವಿಚಾರಣಾಧಿಕಾರಿಯು ಸೂಚಿಸಿರುತ್ತಾರೆ.

ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರೊಡನೆ ಸಮಾಲೋಚಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಒಇ 490 ಪಿಪಿಇ 2007, ಬೆಂಗಳೂರು, ದಿನಾಂಕ 19ನೇ ಜನವರಿ 2010.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಎ.ಕೆ. ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಖಾನಾಪುರರವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಗೆ ಶ್ರೀ ಜಿ.ಎ. ಮೂಲಿಮನಿರವರ ಸ್ಥಾನದಲ್ಲಿ ಶ್ರೀ ಶೀಧರ್ ಗೋಪಾಲ ಕೃಷ್ಣಭಟ್, ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.221

**(ಕೆ.ಸಿ. ಸಿದ್ದಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಉತ್ತರ ಕರ್ನಾಟಕ ಕೈಗಾರಿಕಾ ಅಭಿವೃದ್ಧಿಗಾಗಿ ಪೂರಕ ಯೋಜನೆಗಳಲ್ಲಿ ಹಾವೇರಿ ಜಿಲ್ಲೆಯ ಬ್ಯಾಡಗಿಯಲ್ಲಿ ಆಹಾರ ಕರ್ನಾಟಕ ಲಿಮಿಟೆಡ್. ಬೆಂಗಳೂರು ಮುಖಾಂತರ ಸ್ಪೈಸ್ ಪಾರ್ಕ್ ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು, ಆಹಾರ ಕರ್ನಾಟಕ ಲಿಮಿಟೆಡ್ ರವರ ಅರೆ ಸರ್ಕಾರಿ ಪತ್ರ ಸಂಖ್ಯೆ ಎಫ್‌ಕೆಎಲ್/ಸ್ಪೈಸ್/311/2008–09 ದಿನಾಂಕ 23–12–2009.

**ಪ್ರಸ್ತಾವನೆ :**

ಆಯವ್ಯಯ 2009–10ರಲ್ಲಿ ಮಾನ್ಯ ಮುಖ್ಯ ಮಂತ್ರಿಗಳು ಉತ್ತರ ಕರ್ನಾಟಕದ ಕೈಗಾರಿಕಾಭಿವೃದ್ಧಿಗಾಗಿ ಪೂರಕ ಯೋಜನೆಗಳಲ್ಲಿ ಹಾವೇರಿ ಜಿಲ್ಲೆಯ ಬ್ಯಾಡಗಿಯಲ್ಲಿ ಫುಡ್ ಕರ್ನಾಟಕ ಲಿಮಿಟೆಡ್, ಬೆಂಗಳೂರು ಮುಖಾಂತರ 120 ಎಕರೆ ವಿಸ್ತೀರ್ಣದಲ್ಲಿ ಸ್ಪೈಸ್ ಪಾರ್ಕ್‌ನ್ನು ಪ್ರಾರಂಭಿಸಲು ಪ್ರಸ್ತಾಪಿಸಿದ್ದಾರೆ.

ಆಹಾರ ಕರ್ನಾಟಕ ನಿಯಮಿತದವರು ಐಡೆಕ್‌ನಿಂದ ಸಾಧ್ಯತಾ ವರದಿಯನ್ನು ತಯಾರಿಸಿ ಡಿಪಾರ್ಟ್‌ಮೆಂಟ್ ಆಫ್ ಎಕನಾಮಿಕ್ ಅಫೇರ್ಸ್, ಆರ್ಥಿಕ ಮಂತ್ರಾಲಯ, ಭಾರತ ಸರ್ಕಾರದ ವಯಾಬಿಲಿಟಿ ಗ್ಯಾಪ್ ಫಂಡಿಂಗ್‌ಗಾಗಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ದಿನಾಂಕ 11.12.2009 ರಂದು ನಡೆದ 32ನೇ ಆಹಾರ ಕರ್ನಾಟಕ ನಿಯಮಿತ ಮಂಡಳಿ ಸಭೆಯಲ್ಲಿ ಸ್ಪೈಸ್ ಪಾರ್ಕ್‌ನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಅನುಷ್ಠಾನ ಮಾಡಲು ಸರ್ಕಾರಿ ಆದೇಶವನ್ನು ಹೊರಡಿಸಬೇಕಾಗಿದೆ ಎಂದು ಆಹಾರ ಕರ್ನಾಟಕ ನಿಯಮಿತದ ಅಧ್ಯಕ್ಷರು ತಿಳಿಸಿದ್ದಾರೆ.

ಆದುದರಿಂದ ಈ ಕೆಳಕಂಡ ಆದೇಶ,

**ಸರ್ಕಾರಿ ಆದೇಶ ಕ್ರಮ ಸಂಖ್ಯೆ ಎಸ್‌ಪಿಐ 278 ಎಸ್ಪಿಐ 2009, ಬೆಂಗಳೂರು, ದಿನಾಂಕ 18ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹಾವೇರಿ ಜಿಲ್ಲೆಯ ಬ್ಯಾಡಗಿಯಲ್ಲಿ ಆಹಾರ ಕರ್ನಾಟಕ ನಿಯಮಿತ, ಬೆಂಗಳೂರು ಮುಖಾಂತರ 120 ಎಕರೆ ವಿಸ್ತೀರ್ಣದಲ್ಲಿ ಸ್ಪೈಸ್ ಪಾರ್ಕ್‌ನ್ನು ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದ ಆಧಾರದ ಮೇಲೆ ಸ್ಥಾಪಿಸಲು ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 222

**(ಅಪರ್ಣ ಪಾವಟೆ)**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕೆ.ಎ.ಟಿ. ಅರ್ಜಿ ಸಂಖ್ಯೆ 8232/2003ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿದ ಆದೇಶವನ್ನು ಅನುಷ್ಠಾನಗೊಳಿಸಿ ಸಿ.ವಿ. ನೀಲಾಂಜನಮಠ್, ಮುಖ್ಯ ಇಂಜಿನಿಯರ್ ಅವರಿಗೆ ಪೂರ್ವಾನ್ವಯ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಪತ್ರದ ಸಂಖ್ಯೆ ಸಿಆಸುಇ 96 ಸೇಇಮು 2003, ದಿನಾಂಕ 29–7–2003.

**2)** ಕೆ.ಎ.ಟಿ. ಅರ್ಜಿ ಸಂಖ್ಯೆ 8232/2003ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ 6–7–2008 ರಂದು ಹೊರಡಿಸಿದ ಆದೇಶ.

**ಪ್ರಸ್ತಾವನೆ :**

ಲೋಕೋಪಯೋಗಿ ಇಲಾಖೆಯಿಂದ ಅಧಿಸೂಚನೆ ಸಂಖ್ಯೆ ಲೋಇ 95 ಸೇಎಸು 2001. ದಿನಾಂಕ 20–8–2001 ರಲ್ಲಿ ಪ್ರಕಟಿಸಲ್ಪಟ್ಟ ಸೂಪರಿಂಟೆಂಡಿಂಗ್ ಇಂಜಿನಿಯರ್‌ಗಳ ಜ್ಯೇಷ್ಠತಾ ಪಟ್ಟಿಯನ್ನು ಪರಿಗಣಿಸಿ ದಿನಾಂಕ 27–8–2001 ರ ಅಧಿಸೂಚನೆಯಲ್ಲಿ ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿ ನೀಡಲಾಯಿತು. ಪರಿಗಣನಾ ವಲಯದಲ್ಲಿದ್ದ ಸಿ.ವಿ. ನೀಲಾಂಜನಮಠ್ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದ್ದ ಕಾರಣ ಅವರ ಬಡ್ತಿಯ ಮೌಲ್ಯಮಾಪನವನ್ನು ಮೊಹರು ಲಕೋಟೆಯಲ್ಲಿಡಲಾಯಿತು ಹಾಗೂ ಜ್ಯೇಷ್ಠತೆಯಲ್ಲಿ ಅವರಿಗಿಂತಲೂ ಕಿರಿಯವರಾದ ಸಿ. ಗೋಪಿನಾಥರಾವ್ ಅವರಿಗೆ ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿ ನೀಡಲಾಯಿತು ಸಿ.ವಿ. ನೀಲಾಂಜನಮಠ್ ಅವರ ವಿರುದ್ಧ ಇಲಾಖಾ ವಿಚಾರಣೆಯು ಮುಕ್ತಾಯಗೊಂಡು ದಿನಾಂಕ 18–4–2002ರ ಸರ್ಕಾರಿ ಆದೇಶದಲ್ಲಿ ಅವರನ್ನು ಆರೋಪ ಮುಕ್ತರನ್ನಾಗಿಸಲಾಯಿತು. ಇದರ ಪರಿಣಾಮವಾಗಿ ತಮಗಿಂತ ಜ್ಯೇಷ್ಠತೆಯಲ್ಲಿ ಕಿರಿಯವರಾದ ಸಿ. ಗೋಪಿನಾಥರಾವ್ ಅವರಿಗೆ ಬಡ್ತಿ ನೀಡಿದ ದಿನಾಂಕದಿಂದಲೇ ತಮಗೂ ಸಹ ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿ ನೀಡಿ ಎಲ್ಲಾ ಸೌಲಭ್ಯಗಳನ್ನು ನೀಡಬೇಕೆಂದು ಸಿ.ವಿ. ನೀಲಾಂಜನಮಠ್ ಅವರು ಸಲ್ಲಿಸಿ, ಮನವಿಯನ್ನು ಪರಿಶೀಲಿಸಲಾಯಿತು.

ಸಂವಿಧಾನದ 85ನೇ ತಿದ್ದುಪಡಿ ಹಾಗೂ ರಾಜ್ಯ ಸರ್ಕಾರದಿಂದ ಹೊರಡಿಸಲ್ಪಟ್ಟ ಸುಗ್ರೀವಾಜ್ಞೆಗಳಿಗೆ ಅನುಗುಣವಾಗಿ ಸೂಪರಿಂಟೆಂಡಿಂಗ್ ಇಂಜಿನಿಯರ್‌ಗಳ ಜ್ಯೇಷ್ಠತಾ ಪಟ್ಟಿಯು ಪರಿಷ್ಕೃತಗೊಂಡಿದ್ದು ದಿನಾಂಕ 11–4–2002ರಂದು ಪರಿಷ್ಕೃತ ಜ್ಯೇಷ್ಠತಾ ಪಟ್ಟಿಯು ಜಾರಿಗೆ ಬಂದಿದ್ದು, ಸದರಿ ಪಟ್ಟಿಯನ್ವಯ ಸಿ.ವಿ. ನೀಲಾಂಜನಮಠ್ ಅವರು ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿ ಹೊಂದಲು ಅರ್ಹರಿರಲಿಲ್ಲ. ಆದ್ದರಿಂದ ಸಿ.ವಿ. ನೀಲಾಂಜನಮಠ್ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 29–7–2003ರ ಪತ್ರ ಬರೆದು ಅವರನ್ನು ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿಗೆ ಪರಿಗಣಿಸಲಾಗಿದ್ದ ದಿನಾಂಕ 20–8–2001ರ ಜ್ಯೇಷ್ಠತಾ ಪಟ್ಟಿಯು ಜಾರಿಯಲ್ಲಿ ಇಲ್ಲದಿರುವ ಕಾರಣದಿಂದಾಗಿ ಹಾಗೂ ದಿನಾಂಕ 11–4–2002ರ ಅಧಿಸೂಚನೆಯಲ್ಲಿ ಪ್ರಕಟಗೊಂಡ ಸೂಪರಿಂಟೆಂಡಿಂಗ್ ಇಂಜಿನಿಯರ್‌ಗಳ ಜ್ಯೇಷ್ಠತಾ ಪಟ್ಟಿಯ ಅನ್ವಯ ಅವರು ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿ ಹೊಂದಲು ಅರ್ಹರಿಲ್ಲದಿದ್ದ ಕಾರಣ ಪೂರ್ವಾನ್ವಯ ಬಡ್ತಿ ನೀಡಬೇಕೆಂಬ ಕೋರಿಕೆಯನ್ನು ನಿರಾಕರಿಸಲಾಯಿತು.

ಸರ್ಕಾರದ ಮೇಲಿನ ತೀರ್ಮಾನದ ವಿರುದ್ಧ ಸಿ.ವಿ. ನೀಲಾಂಜನಮಠ್ ಅವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 8232/2003ನ್ನು ಸಲ್ಲಿಸಿದರು. ಈ ಮಧ್ಯೆ ದಿನಾಂಕ 11–4–2002ರ ಜ್ಯೇಷ್ಠತಾ ಪಟ್ಟಿಯನ್ನು ಆಧರಿಸಿ ಸಿ.ವಿ. ನೀಲಾಂಜನಮಠ್ ಅವರಿಗೆ ದಿನಾಂಕ 20–2–2003ರಂದು ಮುಖ್ಯ ಇಂಜಿನಿಯರ್ ಹುದ್ದೆಗೆ ಪದೋನ್ನತಿ ನೀಡಲಾಯಿತು. ಅಧಿಕಾರಿಯು ದಿನಾಂಕ 31–12–2003ರಂದು ವಯೋ ನಿವೃತ್ತಿ ಹೊಂದಿದರು. ಗೌರವಾನ್ವಿತ

ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮೇಲೆ (2)ರಲ್ಲಿ ಓದಲಾದ ದಿನಾಂಕ 6–7–2008ರ ಆದೇಶ ಹೊರಡಿಸಿ ಈ ಕೆಳಕಂಡಂತೆ ನಿರ್ದೇಶನಗಳನ್ನು ನೀಡಿದೆ:

(i) the application is allowed :

(ii) the impugned endorsement bearing No. ಸಿಆಸುಇ 96 ಸೇಇಮು 2003. Dated 29-7-2003 issued by the second respondent is quashed :

(iii) the respondents are directed to effect retrospective promotion to the applicant by giving the benefit of assessment made by the Departmental Promotion Committee in respect of the applicant in their meeting held during 2001 as a result of which applicant's immediate junior was promoted w.e.f. 27-8-2001, under Rule 2(1)(a) of the Karnataka State Civil Services (Regulation of Promotion, Pay and Pension) Rules, 1978 ;

(iv) the respondents are further directed to grant all consequential benefits flowing from out of such promotion ;

(v) the order be compiled with within 3 months from the date on which a certified copy of this order is received by the respondents.

ನ್ಯಾಯಾಲಯದ ದಿನಾಂಕ 6-7–2008ರ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲದ ಪ್ರಕರಣವೆಂದು ದಿನಾಂಕ 31–10–2009ರಂದು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಅಭಿಪ್ರಾಯ ನೀಡಿದೆ. ಈ ಕಾರಣದಿಂದಾಗಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿನಾಂಕ 6–7–2008ರ ಆದೇಶವು ಅಂತಿಮವಾಗಿದೆ. ಇದನ್ನು ಪರಿಗಣಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 198 ಸೇಇಮು 2003, ಬೆಂಗಳೂರು, ದಿನಾಂಕ 20ನೇ ಜನವರಿ 2010.**

ಶ್ರೀ ಸಿ.ವಿ. ನೀಲಾಂಜನಮಠ್, ನಿವೃತ್ತ ಮುಖ್ಯ ಇಂಜಿನಿಯರ್ ಇವರಿಗೆ ಇವರಿಗಿಂತ ಜ್ಯೇಷ್ಠತೆಯಲ್ಲಿ ಕಿರಿಯವರಾದ ಶ್ರೀ ಸಿ. ಗೋಪಿನಾಥರಾವ್ ಇವರಿಗೆ ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿ ನೀಡಿದ ದಿನಾಂಕ 27–8–2001 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪಿ.ಪಿ.ಪಿ) ನಿಯಮಗಳು 1978ರ ನಿಯಮ 2(1)(ಎ)ರನ್ವಯ ಮುಖ್ಯ ಇಂಜಿನಿಯರ್ ಹುದ್ದೆಗೆ ಬಡ್ತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

(1) ಸಂವಿಧಾನದ 85ನೇ ತಿದ್ದುಪಡಿಯನ್ನು ಪ್ರಶ್ನಿಸಿ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿಗಳಲ್ಲಿ ನ್ಯಾಯಾಲಯವು ನೀಡುವ ಅಂತಿಮ ಆದೇಶಕ್ಕನುಗುಣವಾಗಿ ಪರಿಷ್ಕರಿಸಲಾಗುವುದು.

(2) ಅಧೀಕ್ಷಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿದಾಗ ಆಗುವ ಬದಲಾವಣೆಗಳಿಗೊಳಪಟ್ಟು ಬಡ್ತಿಯನ್ನು ಪರಿಷ್ಕರಿಸಲಾಗುವುದು / ಹಿಂಬಡ್ತಿಗೊಳಿಸಲಾಗುವುದು.

ಈ ಪೂವಾನ್ವಯ ಬಡ್ತಿಯ ಪರಿಣಾಮವಾಗಿ ಸಿ.ವಿ. ನೀಲಾಂಜನಮಠ್ ಅವರಿಗೆ ಲಭ್ಯವಾಗುವ ವೇತನ ನಿಗದೀಕರಣ, ಆರ್ಥಿಕ ಸೌಲಭ್ಯ ಹಾಗೂ ಇನ್ನಿತರ ಎಲ್ಲಾ ಸೌಲಭ್ಯಗಳನ್ನು ಅವರು ಪಡೆಯುತ್ತಾರೆ. ಮುಂದುವರೆದಂತೆ ಇದರ ಪರಿಣಾಮವಾಗಿ ಅವರ ವಿಶ್ರಾಂತಿ ವೇತನ ಸೌಲಭ್ಯವು ಪೂರ್ವಾನ್ವಯವಾಗಿಯೇ ಪರಿಷ್ಕರಣೆಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 223

**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ (ಸೇವೆಗಳು–3)

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ 2009–10ನೇ ಸಾಲಿನ ಮೂರನೇ ಕಂತಾಗಿ ರೂ. 205.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಯೋಇ 33 ಹೈಕಮಂ 2009 ದಿನಾಂಕ : 30–05–2009.
2. ಸರ್ಕಾರಿ ಆದೇಶ ಸಂಖ್ಯೆ : ಯೋಇ 33 ಹೈಕಮಂ 2009 ದಿನಾಂಕ : 25–08–2009.
3. ಸರ್ಕಾರಿ ಆದೇಶ ಸಂಖ್ಯೆ : ಯೋಇ 33 ಹೈಕಮಂ 2009 ದಿನಾಂಕ : 12–10–2009.
4. ಅರೆ ಸರ್ಕಾರಿ ಪತ್ರ ಸಂಖ್ಯೆ: ಹೈಕಪ್ರಮಂ/ಹನಿ/ಎಸಿ–1/2009–10/2083, ದಿನಾಂಕ : 14–12–2009

**ಪ್ರಸ್ತಾವನೆ :**

2009–10ನೇ ಸಾಲಿನಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–01–(ಯೋಜನೆ)" ಅಡಿಯಲ್ಲಿ ರೂ. 2100.00 ಲಕ್ಷಗಳನ್ನು ಒದಗಿಸಿದ್ದು, ಈಗಾಗಲೇ ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಮೊದಲನೇ ಕಂತಾಗಿ ರೂ. 400.00 ಲಕ್ಷಗಳನ್ನು (2)ರ ಸರ್ಕಾರದ ಆದೇಶದಲ್ಲಿ ಎರಡನೇ ಕಂತಾಗಿ ರೂ. 495.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ರೂ. 500.00 ಲಕ್ಷಗಳನ್ನು ಹೆಚ್ಚುವರಿ ಸಹಾಯಾನುದಾನವಾಗಿ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (4)ರ ಅರೆ ಸರ್ಕಾರಿ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಇವರು ಮೂರನೇ ಕಂತಾಗಿ ರೂ. 600.00 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುವ ಹಿನ್ನೆಲೆಯಲ್ಲಿ ಮಂಡಳಿಗೆ ಮೂರನೇ ಕಂತಾಗಿ ರೂ. 205.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಯೋಇ 33 ಹೈಕಮಂ 2009, ಬೆಂಗಳೂರು, ದಿನಾಂಕ: 19ನೇ ಜನವರಿ 2010**

2009–10ನೇ ಸಾಲಿನಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ವಿಶೇಷ ಘಟಕ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಮೂರನೇ ಕಂತಾಗಿ ಲೆಕ್ಕ ಶೀರ್ಷಿಕೆ "2515–00–800–0–01–422 (ಯೋಜನೆ)" ಅಡಿಯಲ್ಲಿ ರೂ. 205.00 ಲಕ್ಷಗಳನ್ನು (ಇನ್ನೂರ ಐದು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

2. ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2009–10ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

3. ಈ ಆದೇಶವನ್ನು ಹಿಂಬರಹ ಸಂಖ್ಯೆ : ಆಇ 623 ವೆಚ್ಚ–6/2009 ದಿನಾಂಕ : 08–01–2010ರಲ್ಲಿ ಆರ್ಥಿಕ ಇಲಾಖೆಯು ಸಹಮತಿಸಿರುವಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 231

**(ಬಿ. ಚಿಕ್ಕರಾಜು)**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇಲ್ಲಿನ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಯೋಇ 17 ಹೈಕಮಂ 2007 ದಿನಾಂಕ : 14–07–2008.
2. ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ : ಹೈಕಮಂ/ಸಿಬ್ಬಂದಿ/15/94–95/2385 ದಿನಾಂಕ : 18–03–2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 14–07–2008ರ ಸರ್ಕಾರದ ಆದೇಶದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಸೂಚಿಸಲಾದ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 31–03–2009ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇಲ್ಲಿನ ಕಾರ್ಯಾಲಯದಲ್ಲಿ ಇದುವರೆವಿಗೂ ಮುಂದುವರಿಸಲಾದ ತಾತ್ಕಾಲಿಕ ಹುದ್ದೆಗಳನ್ನು

ದಿನಾಂಕ: 01–04–2009 ರಿಂದ 31–03–2010ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 45 ಹೈಕಮಂ 2008, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸನ್ನಿವೇಶಗಳಿಂದಾಗಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಸೃಜಿಸಲಾದ ಈ ಕೆಳಗೆ ನಮೂದಿಸಿದ ಎಲ್ಲಾ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 01–04–2009 ರಿಂದ 31–03–2010 ರವರೆಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಿದೆ.

| ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|
| **ಅ. ಆಡಳಿತ ವಿಭಾಗ** | |
| 1. ಅಧೀನ ಕಾರ್ಯದರ್ಶಿ | 1 |
| 2. ಬೆರಳಚ್ಚುಗಾರರು | 2 |
| 3. ವಾಹನ ಚಾಲಕರು | 1 |
| **ಆ. ಯೋಜನಾ ವಿಭಾಗ** | |
| 1. ಜಂಟಿ ನಿರ್ದೇಶಕರು (ಯೋ) | 1 |
| 2. ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| 3. ಸಾಂಖ್ಯಿಕ ನಿರೀಕ್ಷಕರು | 1 |
| 4. ಸೀನಿಯರ್ ಪ್ರೋಗ್ರಾಮರ್ | 1 |
| 5. ಕಂಪ್ಯೂಟರ್ ಆಪರೇಟರ್ | 1 |
| **ಇ. ತಾಂತ್ರಿಕ ವಿಭಾಗ** | |
| 1. ಕಾರ್ಯನಿರ್ವಾಹಕ ಅಭಿಯಂತರರು | 1 |
| 2. ಸಹಾಯಕ ಅಭಿಯಂತರರು | 2 |
| 3. ಶೀಘ್ರಲಿಪಿಗಾರರು | 1 |
| 4. ಗ್ರೂಪ್ ಡಿ–1 | 1 |

2. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996ರಲ್ಲಿ ಸರ್ಕಾರದ ಕಾರ್ಯದರ್ಶಿಯವರೆಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.232

**(ಬಿ. ಚಿಕ್ಕರಾಜು)**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** 2009–10ನೇ ಸಾಲಿನ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಕ್ರಿಯಾ ಯೋಜನೆಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ : ಹೈಕಪ್ರಮಂ/ಯೋ–2/5/2009–10/2026 ದಿನಾಂಕ : 16–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರು ರೂ. 5120.85 ಲಕ್ಷಗಳಿಗೆ 2009–10ನೇ ಸಾಲಿನ ಕ್ರಿಯಾ ಯೋಜನೆಯನ್ನು ತಯಾರಿಸಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ. 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2515–00–800–0–01 (ಯೋಜನೆ) ಅಡಿಯಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ರೂ. 2600.00 ಲಕ್ಷಗಳನ್ನು ನಿಗಧಿಪಡಿಸಿ, ಅದರಲ್ಲಿ ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಗೆ ಒದಗಿಸಲಾದ ರೂ. 500.00 ಲಕ್ಷಗಳನ್ನು ಹಿಂದಕ್ಕೆ ಪಡೆದು ಒಟ್ಟು ರೂ. 2100.00 ಲಕ್ಷ ನಿವ್ವಳ ಅನುದಾನ ಹಾಗೂ 2009–10ನೇ ಸಾಲಿನ ಪೂರಕ ಅಂದಾಜಿನಲ್ಲಿ ರೂ. 1000.00

ಲಕ್ಷಗಳನ್ನು ಹೆಚ್ಚುವರಿಯಾಗಿ ಒದಗಿಸಿದ್ದು ಒಟ್ಟಾರೆ 3100.00 ಲಕ್ಷಗಳನ್ನು ಮಂಡಳಿಗೆ ಒದಗಿಸಿದೆ. 2008–09ನೇ ಸಾಲಿನಲ್ಲಿ ಖರ್ಚಾಗದೆ ಉಳಿದ ಹಣ ರೂ. 2058.65 ಲಕ್ಷಗಳು ಮತ್ತು ಮಂಡಳಿಯ ಅನುಷ್ಠಾನಾಧಿಕಾರಿಗಳ ಬಳಿ ಉಳಿದಿರುವ ಹಣ ರೂ. 962.20 ಲಕ್ಷಗಳು ಸೇರಿದಂತೆ ಒಟ್ಟು ರೂ. 6120.85 ಲಕ್ಷಗಳ 2009–10ನೇ ಸಾಲಿನ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಕ್ರಿಯಾ ಯೋಜನೆಯನ್ನು ಅನುಮೋದಿಸಲು ಕೋರಿರುತ್ತಾರೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 76 ಹೈಕಮಂ 2009, ಬೆಂಗಳೂರು, ದಿನಾಂಕ: 18ನೇ ಜನವರಿ 2010**

ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಅಧಿನಿಯಮ 1991ರ ಅಧ್ಯಾಯ–3ರ ಸೆಕ್ಷನ್ 12ರ ಪ್ರಕಾರ ಸರ್ಕಾರಕ್ಕೆ ನೀಡಿರುವ ಅಧಿಕಾರದನ್ವಯ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗ. ಇವರು ಮಂಡಿಸಿರುವ 2009–10ನೇ ಸಾಲಿನ ಕ್ರಿಯಾ ಯೋಜನೆಯನ್ನು ಸರ್ಕಾರವು ಅಂಗೀಕರಿಸಿದ್ದು, ಮಂಡಳಿಗೆ ಲಭ್ಯವಿರುವ ರೂ. 5120.85 ಲಕ್ಷಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಖರ್ಚು ಮಾಡತಕ್ಕದೆಂದು ಆದೇಶಿಸಿದೆ.

| ಕ್ರಮ ಸಂಖ್ಯೆ | ವಿವರ | ಲಕ್ಷ ರೂ. ಗಳಲ್ಲಿ |
|---|---|---|
| 1. | ಮುಂದುವರೆದ 1645 ಕಾಮಗಾರಿಗಳಿಗೆ ಬೇಕಾಗುವ ಅನುದಾನ | 3850.85 |
| 2. | ಸರ್ಕಾರದ ವಿವೇಚನಾ ನಿಧಿ | 41.50 |
| 3. | ಅಧ್ಯಕ್ಷರ ವಿವೇಚನಾ ನಿಧಿ | 41.50 |
| 4. | ಹೊಸ ಕಾಮಗಾರಿಗಳು (42 ಶಾಸಕರುಗಳಿಗೆ ತಲಾ ರೂ. 11.90 ಲಕ್ಷಗಳಂತೆ) | 196.63 |
| 5. | ನಬಾರ್ಡ್ ಕಾಮಗಾರಿಗಳು | 310.00 |
| 6. | ಎಸ್.ಸಿ.ಪಿ. ಕಾಮಗಾರಿಗಳು | 437.36 |
| 7. | ಟಿ.ಎಸ್.ಪಿ. ಕಾಮಗಾರಿಗಳು | 113.01 |
| 8. | ಆಡಳಿತಾತ್ಮಕ ವೆಚ್ಚ | 130.00 |
| | ಮಂಡಳಿಗೆ ಪೂರಕ ಅಂದಾಜಿನಲ್ಲಿ ಒದಗಿಸಲಾದ ಹೆಚ್ಚುವರಿ ಅನುದಾನ (ಮುಂದುವರೆದ ಕಾಮಗಾರಿಗಳಿಗೆ ಬಳಸಿಕೊಳ್ಳುವುದಕ್ಕೆ) | 1000.00 |
| | ಒಟ್ಟು | 6120.85 |

<u>ಷರತ್ತುಗಳು :</u>

1. ಕ್ರಿಯಾ ಯೋಜನೆಯಲ್ಲಿ ಸೇರಿಸಲ್ಪಡುವ ವ್ಯಕ್ತಿಗತ ಕಾಮಗಾರಿಗಳನ್ನು ಅನುಮೋದಿಸುವ ಅಧಿಕಾರವನ್ನು ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಇವರಿಗೆ ನೀಡಲಾಗಿದೆ.
2. ಕ್ರಿಯಾ ಯೋಜನೆಯಲ್ಲಿ ಸೇರಿಸುವ ಕಾಮಗಾರಿಗಳು ಸರ್ಕಾರ ಹೊರಡಿಸಿದ ಮಾರ್ಗಸೂಚಿಯನ್ವಯ ಇರತಕ್ಕದ್ದು.
3. ಈ ಕ್ರಿಯಾ ಯೋಜನೆಯಲ್ಲಿ ಸೇರಿರುವ ಕಾಮಗಾರಿಗಳನ್ನು ಸರ್ಕಾರದ ಅನುಮೋದನೆಯಿಲ್ಲದೆ ಬದಲಾಯಿಸತಕ್ಕುದ್ದಲ್ಲ.
4. ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ವೆಚ್ಚ ಪರಿಷ್ಕರಣೆಯಾದಲ್ಲಿ ಅಂತಹ ಕಾಮಗಾರಿಗಳ ಪರಿಷ್ಕೃತ ಅಂದಾಜು ಪಟ್ಟಿಗೆ ಸರ್ಕಾರದ ಪೂರ್ವಾನುಮೋದನೆಯನ್ನು ಪಡೆಯತಕ್ಕದ್ದು.
5. ಮಂಡಳಿಯು ಮುಂದುವರೆದ ಹಾಗೂ ಹೊಸ ಕಾಮಗಾರಿಗಳ ಪಟ್ಟಿಯನ್ನು ಮಂಡಳಿಯ ಮಾರ್ಗಸೂಚಿಯನ್ವಯ ತಯಾರಿಸಿ ಕಾಲ ವಿಳಂಬ ಮಾಡದೇ ಸರ್ಕಾರಕ್ಕೆ ಕೂಡಲೇ ಕಳುಹಿಸಿಕೊಡುವುದು.

6. ಮಂಡಳಿಯ ಹೊಸ ಕಾಮಗಾರಿವಾರು ಕ್ರಿಯಾ ಯೋಜನೆಯನ್ನು ರೂ. 830 ಲಕ್ಷಗಳಿಗೆ ಸೀಮಿತಗೊಳಿಸಿ, ಹಿಂದುಳಿದ ತಾಲ್ಲೂಕುಗಳ ಅಭಿವೃದ್ಧಿಗೆ ಆದ್ಯತೆ ನೀಡಿ ಭಾರಿ ಕಾಮಗಾರಿಗಳನ್ನು ಅನುಷ್ಠಾನ ಸಮಿತಿಯ ಶಿಫಾರಸ್ಸಿನ ಮೇರೆಗೆ ಮಂಡಳಿಯ ಅನುಮೋದನೆಯನ್ನು ಪಡೆದು ಕೈಗೊಳ್ಳತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.233

**(ಬಿ. ಚಿಕ್ಕರಾಜು)**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಶಿವಮೊಗ್ಗ ಸೆಕ್ಟರ್‌ನಡಿಯಲ್ಲಿ 2005ನೇ ಸಾಲಿಗೆ ಪಲ್ಪ್‌ವುಡ್ ನೆಡುತೋಪುಗಳ ನಿರ್ಮಾಣಕ್ಕಾಗಿ ತಯಾರಿಸಿದ ಪ್ರಾಯೋಜನೆಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ : ಕಅಅನಿನಿ/ಎ3/2005/ಕೆ/2004–05 ದಿನಾಂಕ : 29–10–2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 29–10–2009ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಬೆಂಗಳೂರು ಇವರು ಶಿವಮೊಗ್ಗ ಸೆಕ್ಟರ್‌ನಡಿಯಲ್ಲಿ 2005ನೇ ಸಾಲಿಗೆ 1200.00 ಹೆಕ್ಟೇರ್ ಕ್ಷೇತ್ರದಲ್ಲಿ ಪಲ್ಪ್‌ವುಡ್ ನೆಡುತೋಪುಗಳ ನಿರ್ಮಾಣಕ್ಕಾಗಿ ರೂ. 365.80 ಲಕ್ಷಗಳಿಗೆ ತಯಾರಿಸಿದ ಪ್ರಾಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ಕೋರಿರುತ್ತಾರೆ. ಸದರಿ ಪ್ರಾಯೋಜನೆಗೆ ನಿಗಮದ 200ನೇ ಮಂಡಳಿ ಸಭೆಯಲ್ಲಿ ಚರ್ಚಿಸಿ ಅನುಮೋದನೆ ಪಡೆಯಲಾಗಿದೆಯೆಂದೂ ಹಾಗೂ ಸದರಿ ಪ್ರಾಯೋಜನೆಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸಲಾಗುವುದೆಂದು ತಿಳಿಸಿ, ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 126 ಎಫ್‌ಪಿಸಿ 2009, ಬೆಂಗಳೂರು, ದಿನಾಂಕ: 12ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಬೆಂಗಳೂರು ಇವರು ಶಿವಮೊಗ್ಗ ಸೆಕ್ಟರಿನಡಿಯಲ್ಲಿ 2005ನೇ ಸಾಲಿಗೆ 1200 ಹೆಕ್ಟೇರ್ ಕ್ಷೇತ್ರದಲ್ಲಿ ರೂ. 365.80 ಲಕ್ಷಗಳು (ರೂಪಾಯಿಗಳು ಮೂರು ಕೋಟಿ ಅರವತ್ತೈದು ಲಕ್ಷದ ಎಂಬತ್ತು ಸಾವಿರಗಳು ಮಾತ್ರ) ಪಲ್ಪ್‌ವುಡ್ ನೆಡುತೋಪುಗಳ ಪ್ರಾಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದೆ.

ಸದರಿ ಪ್ರಾಯೋಜನೆಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.234

**(ಪಿ.ಆರ್.ಕಲಾವತಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಡಾ॥ ಇ.ಎಸ್. ನಾಯ್ಕ, ಮಾವಳ್ಳಿ ಗ್ರೂಪ್ ಹಿಂದುಳಿದ ವರ್ಗದ ಕೂಲಿಕಾರರ ಗುತ್ತಿಗೆ ಮತ್ತು ನಿರ್ಮಾಣ ಸಹಕಾರಿ ಸಂಘ ನಿಯಮಿತ, ಮುರ್ಡೇಶ್ವರ ಇವರು 1984–85ನೇ ಸಾಲಿನಲ್ಲಿ ಅರಣ್ಯ ಉತ್ಪನ್ನ ಖರೀದಿಸಿದ ಬಾಕಿ ರೂ. 34,385/– ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ :**

1. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂಪನ್ಮೂಲ ನಿರ್ವಹಣೆ), ಬೆಂಗಳೂರು ಇವರ ಪತ್ರ ಸಂಖ್ಯೆ: ಬಿ4/ಡಿಸಿಬಿ/ವಿವ/2006–07 ದಿನಾಂಕ: 27–11–2007 ಮತ್ತು 27–02–2009.
2. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ಬೆಂಗಳೂರು, ದಿನಾಂಕ : 10–07–1996.

**ಪ್ರಸ್ತಾವನೆ :**

ಡಾ॥ ಇ.ಎಸ್. ನಾಯ್ಕ, ಮಾವಳ್ಳಿ ಗ್ರೂಪ್ ಹಿಂದುಳಿದ ವರ್ಗದ ಕೂಲಿಕಾರರ ಗುತ್ತಿಗೆ ಮತ್ತು ನಿರ್ಮಾಣ ಸಹಕಾರಿ ಸಂಘ ನಿಯಮಿತ, ಮುರ್ಡೇಶ್ವರ ಇವರು ದಿನಾಂಕ : 1–05–1984ರಲ್ಲಿ ಇಡಗುಂಜಿ ಮರಮುಟ್ಟು ಸಂಗ್ರಹಾಲಯದಲ್ಲಿ ರೂ. 89,023/– ಮೌಲ್ಯದ ಕಟ್ಟಿಗೆಯನ್ನು ಖರೀದಿಸಿ, ಹರಾಜಿನ ದಿನ ರೂ. 14,900/– ಗಳನ್ನು ಮಾತ್ರ ಪಾವತಿಸಿದ್ದು, ಬಾಕಿ ಹಣ ಪಾವತಿಸಲು ವಿಫಲರಾದ ಕಾರಣ ಸದರಿ ಕಟ್ಟಿಗೆಯನ್ನು ಇಲಾಖಾ ವತಿಯಿಂದ ಮರು ಹರಾಜು ಮಾಡಿ ಹೊಂದಾಣಿಕೆ ನಂತರ ಸರ್ಕಾರಕ್ಕೆ ರೂ. 34,385/–ಗಳ ನಷ್ಟ ಉಂಟಾಗಿರುತ್ತದೆ. ಡಾ॥ ಇ.ಎಸ್. ನಾಯ್ಕರವರು ಈಗಾಗಲೇ ಮೃತಪಟ್ಟಿರುವುದರಿಂದ ಮತ್ತು ಮೇಲ್ಕಂಡ ಸಂಘವು ದಿವಾಳಿಯಾಗಿರುವುದರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ರೂ. 34,385/– ಗಳನ್ನು ವಸೂಲು ಮಾಡಲು ಸಾಧ್ಯವಾಗದ ಕಾರಣ ಸದರಿ ಮೊತ್ತವನ್ನು ಮನ್ನಾ ಮಾಡುವಂತೆ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 11 ಎಫ್‌ಎಡಿ 2008, ಬೆಂಗಳೂರು, ದಿನಾಂಕ: 18ನೇ ಜನವರಿ 2010**

ಡಾ॥ ಇ.ಎಸ್. ನಾಯ್ಕ್, ಮಾವಳ್ಳಿ ಗ್ರೂಪ್ ಹಿಂದುಳಿದ ವರ್ಗದ ಕೂಲಿಕಾರರ ಗುತ್ತಿಗೆ ಮತ್ತು ನಿರ್ಮಾಣ ಸಹಕಾರಿ ಸಂಘ ನಿಯಮಿತ, ಮುರ್ಡೇಶ್ವರ ಇವರು 1984–85ನೇ ಸಾಲಿನಲ್ಲಿ ಅರಣ್ಯ ಉತ್ಪನ್ನ ಖರೀದಿಸಿದ ಬಾಬ್ತು ಸರ್ಕಾರಕ್ಕೆ ಬರಬೇಕಾದ ಬಾಕಿ ರೂ. 34,385/–ಗಳನ್ನು (ಮೂವತ್ತನಾಲ್ಕು ಸಾವಿರ ಮುನ್ನೂರ ಎಂಬತ್ತೈದು ರೂಪಾಯಿಗಳು ಮಾತ್ರ) ವಸೂಲು ಮಾಡಲು ಸಾಧ್ಯವಾಗದ ಕಾರಣ ಸದರಿ ಮೊತ್ತವನ್ನು ಮನ್ನಾ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.235

**(ಗೋಪಾಲ್)**

ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಹೊಸ ವೆಬ್ ಸೈಟ್ ಪ್ರಾರಂಭಿಸಲು ಅಗತ್ಯವಾದ ಹಣವನ್ನು ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** Delsyst Technologies ವ್ಯವಸ್ಥಾಪಕರ ಪತ್ರ ದಿನಾಂಕ: 29–12–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಯೋಜನಾ ಡೇಟಾ ಬೇಸ್‌ನೊಂದಿಗೆ ಹೊಸ ವೆಬ್ ಸೈಟ್ ಉಡಾವಣಾ ಕಾರ್ಯವನ್ನು Delsyst Technologies ಸಂಸ್ಥೆಗೆ ವಹಿಸಲಾಗಿದ್ದು, ಇದಕ್ಕಾಗಿ ತಗಲುವ ವೆಚ್ಚ ರೂ.26,250–00ಗಳ ಪೈಕಿ ಶೇಕಡಾ 70ರಷ್ಟು ಮೊತ್ತ ರೂ.18,375–00ಗಳನ್ನು ಒಪ್ಪಂದದಂತೆ ಈಗಾಗಲೇ ಬಿಡುಗಡೇ ಮಾಡಿದ್ದು, ಉಳಿದ ಹಣ ರೂ.7,875–00 ಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 107 ಮೂಇವಿ 2009, ಬೆಂಗಳೂರು ದಿನಾಂಕ 27ನೇ ಜನವರಿ 2010**

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಯೋಜನಾ ಡೇಟಾ ಬೇಸ್‌ನೊಂದಿಗೆ ಹೊಸ ವೆಬ್ ಸೈಟ್ ಉಡಾವಣಾ ಕಾರ್ಯಕ್ಕೆ ತಗುಲಿದ ವೆಚ್ಚದ ಪೈಕಿ ಬಾಕಿ ಮೊತ್ತ ರೂ.7,875-00 (ರೂ. ಏಳು ಸಾವಿರದ ಎಂಟು ನೂರ ಎಪ್ಪತ್ತೈದು) ಮಾತ್ರ Delsyst Technologies ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ "3451-00-090-1-06-125- Infrastructure Preliminary Studies-Modernization" ಇದರಡಿ 2009-10ನೇ ಸಾಲಿನಲ್ಲಿ ಒದಗಿಸಿರುವ ರೂ. 100.00 ಲಕ್ಷಗಳ ಆಯವ್ಯಯದಿಂದ ಭರಿಸತಕ್ಕದ್ದು.

3. ಈ ಮೊತ್ತವನ್ನು ನಿರ್ದೇಶಕರು, ಪಿಪಿಪಿ ಕೋಶ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆದು ಸದರಿ ಮೊತ್ತವನ್ನು Delsyst Technologies ಸಂಸ್ಥೆಗೆ ನೀಡಲು ಅನುಮತಿಸಿದೆ.

4. ಈ ಆದೇಶವನ್ನು ದಿನಾಂಕ 16-05-2008ರ ಆದೇಶ ಸಂಖ್ಯೆ FDI TFP 2008ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾ ಯೋಜನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.271

**(ಆರ್. ಶಿವಲಿಂಗಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಹಾಸನದಲ್ಲಿ ಹೊಸದಾಗಿ ಪ್ರಾರಂಭಿಸಿರುವ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು (ವಿಭಜಿತ) ಇಲ್ಲಿನ ತರಗತಿಗಳನ್ನು ನಡೆಸಲು ತಾತ್ಕಾಲಿಕವಾಗಿ ಬಾಡಿಗೆ ಕಟ್ಟಡಕ್ಕೆ ಸ್ಥಳಾಂತರಿಸಿರುವುದರಿಂದ ಬಾಬ್ತು ಬಾಡಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಪಪೂಶಿಇ/ಕಟ್ಟಡ/ಕನಿ/ನಿವೇಶನ/01/07-08, ದಿನಾಂಕ 14-12-2009.

**ಪ್ರಸ್ತಾವನೆ :**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ ಪತ್ರದಲ್ಲಿ 2007-08ನೇ ಸಾಲಿಗೆ ಹಾಸನದಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು (ವಿಭಜಿತ) ಈ ಕಾಲೇಜಿಗೆ ತರಗತಿಗಳನ್ನು ನಡೆಸಲು ಸ್ಥಳಾವಕಾಶ ಇಲ್ಲದ ಕಾರಣ ಬಾಡಿಗೆ ಕಟ್ಟಡದಲ್ಲಿ ನಡೆಸುತ್ತಿದ್ದು, ಈ ಕೆಳಕಂಡ ಬಾಡಿಗೆ ಬಾಕಿ ನೀಡಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

| ಕಾಲೇಜಿನ ಹೆಸರು | ಬಾಡಿಗೆ ಕಟ್ಟಡದ ವಿಳಾಸ | ಬಾಡಿಗೆ ಕಟ್ಟಡದಲ್ಲಿದ್ದ ಅವಧಿ | ಒಟ್ಟು ಬಾಡಿಗೆ ಮೊತ್ತ | ವಿದ್ಯುತ್ ವೆಚ್ಚ | ಒಟ್ಟು ಮೊತ್ತ |
|---|---|---|---|---|---|
| ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, (ವಿಭಜಿತ) ಹಾಸನ | ಅಂಭಾಭವಾನಿ ಛತ್ರ, ಹಾಸನ | 01-06-2007ರಿಂದ 31-03-2008ರ ತನಕ ಒಟ್ಟು 10 ತಿಂಗಳು | ತಿಂಗಳಿಗೆ 11,500/- ದಂತೆ ಒಟ್ಟು ರೂ. 1,15.000 | 2500/- | 1,17,500=00 |
| | ನಿವೃತ್ತ ನೌಕರರ ಭವನ ಹಾಸನ | 01-06-2007ರಿಂದ 31-03-2008ರತನಕ ಒಟ್ಟು 10 ತಿಂಗಳು | ತಿಂಗಳಿಗೆ 14,000/-ದಂತೆ ಒಟ್ಟು ರೂ.1,40,000 | 2500/- | 1,42,000=00 |
| | ಕೆಂಪು ಚಲುವಜಮ್ಮಣ್ಣಿ ಮಹಿಳಾ ಸಮಾಜ ಹಾಸನ | 01-06-2007 ರಿಂದ 31-03-2008 ರತನಕ ಒಟ್ಟು 10 ತಿಂಗಳು | ಒಟ್ಟು ಮೊತ್ತ ತಿಂಗಳಿಗೆ 11,500/- ದಂತೆ 1,15,000/- ರೂ.ಗಳು | 3500/- | 1,18,500=00 |
| | | | | ಒಟ್ಟು ಮೊತ್ತ ರೂ. | 3,78,000=00 |

2) ಈ ಮೊತ್ತವನ್ನು ಲೆಕ್ಕಶೀರ್ಷಿಕೆ 2202-02-109-0-13-059 ಯೋಜನೆ ಅಡಿ ಒದಗಿಸಿರುವ ಅನುದಾನದಲ್ಲಿ ಭರಿಸುವುದಾಗಿ ತಿಳಿಸಿರುತ್ತಾರೆ.

3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 296 : ಯೋಸಕ 2009 ಬೆಂಗಳೂರು, ದಿನಾಂಕ 20ನೇ ಜನವರಿ 2010**

**(ಇಡಿ: 7 : ಸ್ಕೀಮರ (ಯುನಿಕ್) ದಿನಾಂಕ 20ನೇ ಜನವರಿ 2010)**

4) 2007–08ನೇ ಸಾಲಿಗೆ ಹಾಸನದಲ್ಲಿ ಹೊಸದಾಗಿ ಪ್ರಾರಂಭಿಸಲಾದ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು (ವಿಭಜಿತ) ಕಾಲೇಜಿಗೆ ತರಗತಿಗಳನ್ನು ನಡೆಸಲು ಪಡೆಯಲಾಗಿದ್ದ ಬಾಡಿಗೆ ಬಾಬ್ತನ್ನು ಈ ಕೆಳಕಂಡಂತೆ ನೀಡಲು ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಅನುಮತಿ ನೀಡಲಾಗಿದೆ.

| ಕಾಲೇಜಿನ ಹೆಸರು | ಬಾಡಿಗೆ ಕಟ್ಟಡದ ವಿಳಾಸ | ಬಾಡಿಗೆ ಕಟ್ಟಡದಲ್ಲಿದ್ದ ಅವಧಿ | ಒಟ್ಟು ಬಾಡಿಗೆ ಮೊತ್ತ | ವಿದ್ಯುತ್ ವೆಚ್ಚ | ಒಟ್ಟು ಮೊತ್ತ |
|---|---|---|---|---|---|
| ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, (ವಿಭಜಿತ) ಹಾಸನ | ಅಂಭಾಭವಾನಿ ಛತ್ರ, ಹಾಸನ | 01–06–2007ರಿಂದ 31–03–2008ರ ತನಕ ಒಟ್ಟು 10 ತಿಂಗಳು | ತಿಂಗಳಿಗೆ 11,500/– ದಂತೆ ಒಟ್ಟು ರೂ. 1,15.000 | 2500/– | 1,17,500=00 |
| | ನಿವೃತ್ತ ನೌಕರರ ಭವನ ಹಾಸನ | 01–06–2007ರಿಂದ 31–03–2008ರತನಕ ಒಟ್ಟು 10 ತಿಂಗಳು | ತಿಂಗಳಿಗೆ 14,000/–ದಂತೆ ಒಟ್ಟು ರೂ.1,40,000 | 2500/– | 1,42,000=00 |
| | ಕೆಂಪು ಚಲುವಜಮ್ಮಣ್ಣಿ ಮಹಿಳಾ ಸಮಾಜ ಹಾಸನ | 01–06–2007 ರಿಂದ 31–03–2008 ರತನಕ ಒಟ್ಟು 10 ತಿಂಗಳು | ಒಟ್ಟು ಮೊತ್ತ ತಿಂಗಳಿಗೆ 11,500/– ದಂತೆ 1,15,000/– ರೂ.ಗಳು | 3500/– | 1,18,500=00 |
| | | | | ಒಟ್ಟು ಮೊತ್ತ ರೂ. | 3,78,000=00 |

5) ಮೇಲ್ಕಂಡ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2202–02–109–0–13–059 (ಇತರೆ ಖರ್ಚುಗಳು) ಯೋಜನೆ ಅಡಿ ಒದಗಿಸಿರುವ ಅನುದಾನದ ಮಿತಿಯೊಳಗೆ ಭರಿಸತಕ್ಕದ್ದು.

6) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅಧಿಕೃತ ಟಿಪ್ಪಣಿ ಸಂಖ್ಯೆ ಶಿಇ/39/ಐಎಫ್ (ಬಿ&ಎ) 2010 ದಿನಾಂಕ 07–01–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.272

**(ಐ.ಎಫ್ ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ತುಮಕೂರಿನಲ್ಲಿರುವ ಸರ್ಕಾರಿ ವಿಜ್ಞಾನ ಕಾಲೇಜು ಮತ್ತು ಸರ್ಕಾರಿ ಕಲಾ ಕಾಲೇಜುಗಳನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಹಸ್ತಾಂತರಿಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರದ ಪತ್ರ ಸಂಖ್ಯೆ : ಇಡಿ 20 ಯುಆರ್‌ಸಿ 2008, ದಿನಾಂಕ 13–05–2009.
2. ಕಾಲೇಜು ಶಿಕ್ಷಣ ಆಯುಕ್ತರ ಆದೇಶ ಸಂಖ್ಯೆ : ಕಾಶಿಇ/35/ಯೋಜನೆ/2006–07, ದಿನಾಂಕ 26–05–2009
3. ಕುಲಸಚಿವರು, ತುಮಕೂರು ವಿಶ್ವವಿದ್ಯಾನಿಲಯ, ಇವರ ಪತ್ರ ಸಂಖ್ಯೆ : ತುವಿ/ಸಿಬ್ಬಂದಿ/2458/2009–10, ದಿನಾಂಕ 9–12–2009

**ಪ್ರಸ್ತಾವನೆ :**

ತುಮಕೂರಿನಲ್ಲಿರುವ ಸರ್ಕಾರಿ ಕಲಾ ಮತ್ತು ಸರ್ಕಾರಿ ವಿಜ್ಞಾನ ಕಾಲೇಜುಗಳನ್ನು ತುಮಕೂರು ವಿಶ್ವವಿದ್ಯಾನಿಲಯದ ಘಟಕ ಕಾಲೇಜುಗಳನ್ನಾಗಿ ಅನುಮೋದಿಸಿರುವುದರಿಂದ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ಪ್ರಕರಣ 82 ರನ್ವಯ ಸದರಿ ಕಾಲೇಜುಗಳು ತುಮಕೂರು ವಿಶ್ವವಿದ್ಯಾನಿಲಯದ ಭಾಗವಾಗಿದ್ದು ಅದರನ್ವಯ ಸದರಿ ಕಾಲೇಜುಗಳನ್ನು ಕಾಲೇಜುಗಳ ಸರ್ವತೋಮುಖ ಅಭಿವೃದ್ಧಿಗಾಗಿ ಅವುಗಳ ಆಸ್ತಿ ಮತ್ತು ದಾಯಿತ್ವ ಪಟ್ಟಿಗಳೊಂದಿಗೆ ತುಮಕೂರು ವಿಶ್ವವಿದ್ಯಾನಿಲಯಕ್ಕೆ ಹಸ್ತಾಂತರಿಸಲು

ಮೇಲೆ ಓದಲಾದ (1)ರ ಪತ್ರದನ್ವಯ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ನಿರ್ದೇಶನ ನೀಡಲಾಗಿತ್ತು ಸರ್ಕಾರದ ನಿರ್ದೇಶನದನ್ವಯ ಕಾಲೇಜು ಶಿಕ್ಷಣ ಆಯುಕ್ತರು ಮೇಲೆ ಓದಲಾದ (2) ರಲ್ಲಿರುವ ಆದೇಶದನ್ವಯ ತುಮಕೂರು ನಗರದಲ್ಲಿರುವ ಎರಡು ಕಾಲೇಜುಗಳಾದ ಸರ್ಕಾರಿ ವಿಜ್ಞಾನ ಕಾಲೇಜು ಮತ್ತು ಸರ್ಕಾರಿ ಕಲಾ ಕಾಲೇಜುಗಳನ್ನು ಕೆಲವು ಷರತ್ತುಗಳಿಗೊಳಪಡಿಸಿ ಹಾಗೂ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ ವಿಶ್ವವಿದ್ಯಾನಿಲಯಕ್ಕೆ ವಹಿಸಿರುತ್ತಾರೆ. ಕುಲಸಚಿವರು, ತುಮಕೂರು ವಿಶ್ವವಿದ್ಯಾನಿಲಯ, ಇವರು ಮೇಲೆ ಓದಲಾದ (3)ರ ಪತ್ರದಲ್ಲಿ ಸದರಿ ಕಾಲೇಜುಗಳಿಗೆ ಬೋಧಕ ಹಾಗೂ ಬೋಧಕೇತರ ಹುದ್ದೆಗಳು, ಆಸ್ತಿ ಮತ್ತು ದಾಯಿತ್ವಗಳು, ಜಮೀನು ಕಟ್ಟಡಗಳು, ವಸತಿ ನಿಲಯದ ಕಟ್ಟಡಗಳು, ಅದಕ್ಕೆ ಸಂಬಂಧಿಸಿದ ಚಕ್ಕುಬಂದಿ ಮತ್ತು ನಕ್ಷೆಗಳೊಂದಿಗೆ ಹಸ್ತಾಂತರಿಸುವ ಕುರಿತು ತುರ್ತಾಗಿ ಆದೇಶ ಹೊರಡಿಸುವಂತೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಇಡಿ 118 ಯುಟಿಟಿ 2009 ಬೆಂಗಳೂರು, ದಿನಾಂಕ 21ನೇ ಜನವರಿ 2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು, ತುಮಕೂರು ನಗರದಲ್ಲಿರುವ ಎರಡು ಕಾಲೇಜುಗಳಾದ ಸರ್ಕಾರಿ ವಿಜ್ಞಾನ ಕಾಲೇಜು ಮತ್ತು ಸರ್ಕಾರಿ ಕಲಾ ಕಾಲೇಜುಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಕೂಡಲೇ ಜಾರಿಗೆ ಬರುವಂತೆ ಹಸ್ತಾಂತರಿಸಲಾಗಿದೆ.

**ಷರತ್ತುಗಳು:–**

1) ತುಮಕೂರು ಸರ್ಕಾರಿ ವಿಜ್ಞಾನ ಕಾಲೇಜು ಮತ್ತು ಸರ್ಕಾರಿ ಕಲಾ ಕಾಲೇಜನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಹಸ್ತಾಂತರಿಸಿದ ನಂತರ ಅವುಗಳನ್ನು ಘಟಕ ಕಾಲೇಜುಗಳನ್ನಾಗಿ ನಿರ್ವಹಿಸತಕ್ಕದ್ದು ;

2) ಪ್ರಸ್ತುತ ಸದರಿ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ನೌಕರರು ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಉಳಿದುಕೊಳ್ಳಲು ಅಥವಾ ವಿಶ್ವವಿದ್ಯಾನಿಲಯದ ಸೇವೆಗೆ ಸೇರಲು ಅವರುಗಳಿಗೆ ಸೂಕ್ತ ಅವಕಾಶಗಳನ್ನು ಕಲ್ಪಿಸತಕ್ಕದ್ದು.

3) ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಿಂದ ತುಮಕೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಬರುವ ಬೋಧಕ ಮತ್ತು ಬೋಧಕೇತರ ನೌಕರರುಗಳ ಜ್ಯೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜ್ಯೇಷ್ಠತೆ ನಿಯಮಗಳು), 1957ರ ನಿಯಮ 6 ರನ್ವಯ ಪರಿಗಣಿಸತಕ್ಕದ್ದು ;

4) 2009–10ನೇ ಸಾಲಿನ ಆಯವ್ಯಯದಲ್ಲಿ ತುಮಕೂರಿನ ಎರಡು ಸರ್ಕಾರಿ ಕಾಲೇಜುಗಳಾದ ಸರ್ಕಾರಿ ವಿಜ್ಞಾನ ಕಾಲೇಜು ಮತ್ತು ಸರ್ಕಾರಿ ಕಲಾ ಕಾಲೇಜುಗಳಿಗೆ ಮಾಡಿರುವ ವೆಚ್ಚದ ಅಂದಾಜುಗಳನ್ನು ತುಮಕೂರು ವಿಶ್ವವಿದ್ಯಾನಿಲಯದ ಯೋಜನೇತರ ಅನುದಾನಕ್ಕೆ ಸೇರಿಸತಕ್ಕದ್ದು.

5) ಸದರಿ ಎರಡು ಕಾಲೇಜುಗಳ ಆಸ್ತಿ ಮತ್ತು ದಾಯಿತ್ವಗಳನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಹಸ್ತಾಂತರಿಸುವ ಪ್ರಕ್ರಿಯೆಯಲ್ಲಿ ಏನಾದರೂ ಮಾರ್ಗದರ್ಶನ ಅಥವಾ ಸ್ಪಷ್ಟೀಕರಣ ಅವಶ್ಯವಿದ್ದಲ್ಲಿ ಒಂದು ಅಂತಿಮ ವರದಿಯೊಂದಿಗೆ ಸರ್ಕಾರವನ್ನು ಸಂಪರ್ಕಿಸತಕ್ಕದ್ದು ;

6) ಎರಡು ಸರ್ಕಾರಿ ಕಾಲೇಜುಗಳಾದ ಸರ್ಕಾರಿ ವಿಜ್ಞಾನ ಕಾಲೇಜು ಮತ್ತು ಸರ್ಕಾರಿ ಕಲಾ ಕಾಲೇಜುಗಳಿಗೆ ಸೇರಿದ ನಿವೇಶನದಲ್ಲಿ ಮುಂದೆ ಅವಶ್ಯಕತೆಯಿದ್ದಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಉಪಯೋಗಕ್ಕೆ ಬೇಕಾದ ನಿವೇಶನವನ್ನು ಸರ್ಕಾರದ ಅನುಮೋದನೆಯೊಂದಿಗೆ ಕಾಲೇಜು ಶಿಕ್ಷಣ ಇಲಾಖೆಯು ಪಡೆದುಕೊಳ್ಳಲು ಹಕ್ಕನ್ನು ಹೊಂದಿರುತ್ತದೆ.

7) ಸದರಿ ಎರಡು ಕಾಲೇಜುಗಳ ಜಮೀನಿಗೆ ಸಂಬಂಧಿಸಿದಂತೆ ಸರ್ವೆ ನಂ.316 ರಿಂದ 326 ರವರೆಗೆ ಹಾಗೂ ಖಾತೆ ಸಂಖ್ಯೆ: 3436಼3840 ಹಾಗೂ 3437಼3841ರ ಪ್ರಕಾರ ಕಾಲೇಜಿನ ಒಟ್ಟು ವಿಸ್ತೀರ್ಣ 110.10 ಎಕರೆ ಇದ್ದು ಸದರಿ ಜಮೀನಿನಲ್ಲಿರುವ ಕಟ್ಟಡ ಮತ್ತು ಇತರೆ ಸ್ಥಿರಾಸ್ತಿ ಮತ್ತು ಚರಾಸ್ತಿ ಹಾಗೂ ಸದರಿ ಕಾಲೇಜುಗಳಿಗೆ ಸಂಬಂಧಿಸಿದ ಪುರುಷರ ವಿದ್ಯಾರ್ಥಿ ನಿಲಯ ಮತ್ತು ತುಮಕೂರು ರೈಲ್ವೆ ನಿಲ್ದಾಣದ ಹತ್ತಿರವಿರುವ ಮಹಿಳಾ ವಿದ್ಯಾರ್ಥಿ ನಿಲಯಗಳನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಹಸ್ತಾಂತರಿಸಲಾಗಿದೆ.

8) ಸರ್ಕಾರಿ ಕಲಾ ಕಾಲೇಜಿನ ಬ್ಯಾಂಕ್ ಖಾತೆಯಲ್ಲಿರುವ ರೂ.73,21,313,28 ಹಾಗೂ ಖಜಾನೆ ಖಾತೆಗೆ ಸಂಬಂಧಪಟ್ಟ ರೂ.5,198.00, ಹಾಗೂ ಸರ್ಕಾರಿ ವಿಜ್ಞಾನ ಕಾಲೇಜಿನ ಬ್ಯಾಂಕ್ ಖಾತೆಯಲ್ಲಿರುವ ರೂ.64,67,296.94 ಹಾಗೂ ಖಜಾನೆ ಖಾತೆಗೆ ಸಂಬಂಧಪಟ್ಟ ಹಣ ರೂ.1,09,194.00 ಗಳನ್ನು ತಕ್ಷಣವೇ ತುಮಕೂರು ವಿಶ್ವವಿದ್ಯಾನಿಲಯಕ್ಕೆ ಈ ಮೂಲಕ ಹಸ್ತಾಂತರಿಸಲಾಗಿದೆ.

9) ಸರ್ಕಾರಿ ವಿಜ್ಞಾನ ಕಾಲೇಜು, ತುಮಕೂರು, ಇಲ್ಲಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳನ್ನು ಅನುಬಂಧ–1 ರಲ್ಲಿಯೂ ಹಾಗೂ ಸರ್ಕಾರಿ ಕಲಾ ಕಾಲೇಜು, ತುಮಕೂರು ಇಲ್ಲಿನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳನ್ನು ಅನುಬಂಧ–2 ರಲ್ಲಿಯೂ ಇರುವಂತೆ ಮೇಲೆ ಹೇಳಿರುವ ಷರತ್ತುಗಳನ್ವಯ ತುಮಕೂರು ವಿಶ್ವವಿದ್ಯಾನಿಲಯಕ್ಕೆ ವಹಿಸಲಾಗಿದೆ.

. ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.273

**(ಬಿ.ಎಸ್. ಜಾಪಾಲಿ)**
ಸರ್ಕಾರದ ಉಪ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ
(ವಿಶ್ವವಿದ್ಯಾನಿಲಯಗಳು)

**ಅನುಬಂಧ–1**

**ಸರ್ಕಾರಿ ವಿಜ್ಞಾನ ಕಾಲೇಜು, ತುಮಕೂರು – ಬೋಧಕ ಸಿಬ್ಬಂದಿಯವರ ವಿವರ :**

| ಕ್ರಮ ಸಂಖ್ಯೆ | ಹುದ್ದೆಗಳು | ಮಂಜೂರಾದ ಹುದ್ದೆಗಳು |
|---|---|---|
| 1. | ಪ್ರಾಂಶುಪಾಲರು | 01 |
| 2 | ಗ್ರಂಥಪಾಲಕರು | 01 |
| 3 | ದೈಹಿಕ ಶಿಕ್ಷಣ ನಿರ್ದೇಶಕರು | 01 |
| 4 | ಕಂಪ್ಯೂಟರ್ ಸೈನ್ಸ್ ಉಪನ್ಯಾಸಕರು | 07 |
| 5. | ಕನ್ನಡ ಉಪನ್ಯಾಸಕರು | 03 |
| 6. | ಇಂಗ್ಲೀಷ್ ಉಪನ್ಯಾಸಕರು | 03 |
| 7. | ಗಣಿತ ಉಪನ್ಯಾಸಕರು | 10 |
| 8. | ಜೀವಿಶಾಸ್ತ್ರ ಉಪನ್ಯಾಸಕರು | 02 |
| 9. | ಎಲೆಕ್ಟ್ರಾನಿಕ್ಸ್ ಉಪನ್ಯಾಸಕರು | 03 |
| 10. | ಭೌತಶಾಸ್ತ್ರ ಉಪನ್ಯಾಸಕರು | 21 |
| 11. | ಜೀವರಸಾಯನಶಾಸ್ತ್ರ ಉಪನ್ಯಾಸಕರು | 03 |
| 12. | ರಸಾಯನಶಾಸ್ತ್ರ ಉಪನ್ಯಾಸಕರು | 16 |
| 13. | ಪ್ರಾಣಿಶಾಸ್ತ್ರ ಉಪನ್ಯಾಸಕರು | 07 |
| 14. | ಸೂಕ್ಷ್ಮ ಜೀವಶಾಸ್ತ್ರ ಉಪನ್ಯಾಸಕರು | 04 |
| 15. | ಸಸ್ಯಶಾಸ್ತ್ರ ಉಪನ್ಯಾಸಕರು | 02 |
| 16. | ಜೀವ ತಂತ್ರಜ್ಞಾನ ಉಪನ್ಯಾಸಕರು | 05 |
| | **ಒಟ್ಟು** | **89** |

**ಸರ್ಕಾರಿ ವಿಜ್ಞಾನ ಕಾಲೇಜು, ತುಮಕೂರು – ಬೋಧಕೇತರ ಸಿಬ್ಬಂದಿಯವರ ವಿವರ**

| ಕ್ರಮ ಸಂಖ್ಯೆ | ಹುದ್ದೆಗಳು | ಮಂಜೂರಾದ ಹುದ್ದೆಗಳು |
|---|---|---|
| 1. | ಮ್ಯಾನೇಜರ್ | 01 |
| 2. | ಅಧೀಕ್ಷಕರು | 01 |
| 3 | ಪ್ರಥಮ ದರ್ಜೆ ಸಹಾಯಕರು | 02 |
| 4. | ದ್ವಿತೀಯ ದರ್ಜೆ ಸಹಾಯಕರು | 02 |
| 5. | ಬೆರಳಚ್ಚುಗಾರರು | 02 |

| | | |
|---|---|---|
| 6. | ಗ್ರಂಥಾಲಯ ಸಹಾಯಕರು | 01 |
| 7. | ಅಟೆಂಡರ್ | 12 |
| 8. | ಜವಾನರು (ಗ್ರೂಪ್ ಡಿ) | 14 |
| | **ಒಟ್ಟು** | **35** |

**ಬಿ.ಎಸ್. ಜಾಪಾಲಿ**
ಸರ್ಕಾರದ ಉಪ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು)

**ಅನುಬಂಧ–2**

**ಸರ್ಕಾರಿ ಕಲಾ ಕಾಲೇಜು, ತುಮಕೂರು – ಬೋಧಕ ಸಿಬ್ಬಂದಿಯವರ ವಿವರ :**

| **ಕ್ರಮ ಸಂಖ್ಯೆ** | **ಹುದ್ದೆಗಳು** | **ಮಂಜೂರಾದ ಹುದ್ದೆಗಳು** |
|---|---|---|
| 1. | ಪ್ರಾಂಶುಪಾಲರು | 01 |
| 2 | ಗ್ರಂಥಪಾಲಕರು | 01 |
| 3 | ದೈಹಿಕ ಶಿಕ್ಷಣ ನಿರ್ದೇಶಕರು | 01 |
| 4 | ಕನ್ನಡ ಉಪನ್ಯಾಸಕರು | 06 |
| 5. | ಇಂಗ್ಲೀಷ್ ಉಪನ್ಯಾಸಕರು | 07 |
| 6. | ಹಿಂದಿ ಉಪನ್ಯಾಸಕರು | 01 |
| 7. | ಉರ್ದು ಉಪನ್ಯಾಸಕರು | 01 |
| 8. | ಇತಿಹಾಸ ಉಪನ್ಯಾಸಕರು | 05 |
| 9. | ಅರ್ಥಶಾಸ್ತ್ರ ಉಪನ್ಯಾಸಕರು | 05 |
| 10. | ರಾಜ್ಯಶಾಸ್ತ್ರ ಉಪನ್ಯಾಸಕರು | 05 |
| 11. | ಸಮಾಜಶಾಸ್ತ್ರ ಉಪನ್ಯಾಸಕರು | 03 |
| 12. | ವಾಣಿಜ್ಯಶಾಸ್ತ್ರ ಉಪನ್ಯಾಸಕರು | 08 |
| 13. | ಜರ್ನಲಿಜಮ್ ಉಪನ್ಯಾಸಕರು | 01 |
| | **ಒಟ್ಟು** | **45** |

**ಸರ್ಕಾರಿ ಕಲಾ ಕಾಲೇಜು, ತುಮಕೂರು – ಬೋಧಕೇತರ ಸಿಬ್ಬಂದಿಯವರ ವಿವರ**

| **ಕ್ರಮ ಸಂಖ್ಯೆ** | **ಹುದ್ದೆಗಳು** | **ಮಂಜೂರಾದ ಹುದ್ದೆಗಳು** |
|---|---|---|
| 1. | ಮ್ಯಾನೇಜರ್ | 01 |
| 2. | ಅಧೀಕ್ಷಕರು | 02 |
| 3 | ಪ್ರಥಮ ದರ್ಜೆ ಸಹಾಯಕರು | 03 |
| 4. | ದ್ವಿತೀಯ ದರ್ಜೆ ಸಹಾಯಕರು | 05 |
| 5. | ಬೆರಳಚ್ಚುಗಾರರು | 02 |
| 6. | ಅಟೆಂಡರ್ | 04 |
| 7. | ಜವಾನರು | 12 |
| 8. | ಹಾಸ್ಟೆಲ್ (ಗ್ರೂಪ್ ಡಿ) | 03 |
| | **ಒಟ್ಟು** | **32** |

**(ಬಿ.ಎಸ್. ಜಾಪಾಲಿ)**
ಸರ್ಕಾರದ ಉಪ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ವಿವಿಧ ಸರ್ಕಾರಿ ವಿವಿಧ ಇಂಜಿನಿಯರಿಂಗ್ ಕಾಲೇಜುಗಳಿಗೆ ಪೀಠೋಪಕರಣಗಳನ್ನು ಖರೀದಿ ಮಾಡುವುದಕ್ಕೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಕಡತ ಸಂಖ್ಯೆ : ಡಿಟಿಇ 373 ಎಸ್‌ಪಿಎಸ್ (2) 2009

**ಪ್ರಸ್ತಾವನೆ :**

2008–09ನೇ ಸಾಲಿನ ವಿವಿಧ ಸ್ಥಳಗಳಲ್ಲಿ ಹೊಸದಾಗಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭ ಮಾಡಲಾಗಿದೆ. ಈ ಸರ್ಕಾರಿ ಕಾಲೇಜುಗಳಲ್ಲಿ ಡೆಸ್ಕ್‌ಗಳು, ಕಛೇರಿ ಪೀಠೋಪಕರಣಗಳು, ಗ್ರಂಥಾಲಯಕ್ಕೆ ಬೇಕಾಗುವ ಪೀಠೋಪಕರಣಗಳು ಹಾಗೂ ಲ್ಯಾಬ್‌ಗಳಿಗೆ ಬೇಕಾಗುವ ಕಂಪ್ಯೂಟರ್ ಛೇರ್ ಮತ್ತು ಟೇಬಲ್‌ಗಳನ್ನು ರ್‍ಯಾಕ್ ಪೀಠೋಪಕರಣಗಳು ತುರ್ತಾಗಿ ಖರೀದಿಸಬೇಕೆಂದು ತಾಂತ್ರಿಕ ನಿರ್ದೇಶಕರು ಪ್ರಸ್ತಾಪಿಸಿರುತ್ತಾರೆ.

ಇಲಾಖಾ ಮುಖ್ಯಸ್ಥರಿಗೆ ಇಡಿ 131 ಟಿಪಿಇ 98 ದಿನಾಂಕ 19–12–2002ರಲ್ಲಿನ ಪ್ರತ್ಯಾಯೋಜನೆ ಅಧಿಕಾರದನ್ವಯ ಒಂದು ಪ್ರಸ್ತಾವನೆಗೆ ರೂ.20,000–00ಗಳ ಮಿತಿಯಲ್ಲಿ ಖರೀದಿ ಮಾಡಲು ಮಾತ್ರ ತಿಳಿಸಲಾಗಿದೆ. 2008–09ನೇ ಸಾಲಿನಲ್ಲಿ ಪ್ರಾರಂಭ ಮಾಡಿರುವ ಹೊಸ ಇಂಜಿನಿಯರಿಂಗ್ ಕಾಲೇಜುಗಳಿಗೆ ಪೀಠೋಪಕರಣಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯುವುದರಿಂದ ಅದು ಸರ್ಕಾರಕ್ಕೆ ಅನಗತ್ಯ ಹೊರೆಯಾಗುತ್ತದೆ. ಇಂಜಿನಿಯರಿಂಗ್ ಕಾಲೇಜುಗಳಿಂದ ಬಂದಿರುವ ಪೀಠೋಪಕರಣಗಳ ಖರೀದಿ ಪ್ರಸ್ತಾವನೆಗಳನ್ನು ಕ್ರೋಢಿಕರಿಸಿ ಒಟ್ಟು ರೂ.31,25,702–00 ಮೊತ್ತವನ್ನು 2009–10ನೇ ಸಾಲಿನ ರಾಜ್ಯ ಯೋಜನಾ ಲೆಕ್ಕ ಶೀರ್ಷಿಕೆ "2203–00–112–0–01–221" (ಯೋಜನೆ) ಅಡಿ ಭರಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 05 ಯೋಸಕ 2010, ಬೆಂಗಳೂರು, ದಿನಾಂಕ 16ನೇ ಜನವರಿ 2010**

ರಾಜ್ಯದ ವಿವಿಧ ಸ್ಥಳಗಳಲ್ಲಿ ಹೊಸದಾಗಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ ಡೆಸ್ಕ್‌ಗಳು, ಕಂಪ್ಯೂಟರ್ ಛೇರ್, ಟೇಬಲ್, ಕಛೇರಿ ಪೀಠೋಪಕರಣಗಳನ್ನು ಲೆಕ್ಕ ಶೀರ್ಷಿಕೆ "2203–00–112–0–01–221"(ಯೋಜನೆ) ಅಡಿ ನಿಗದಿಯಾಗಿರುವ ಅನುದಾನದ ಮಿತಿಯಲ್ಲಿ ರೂ.31,25,702–00 ಲಕ್ಷ ಮೊತ್ತದ ಪೀಠೋಪಕರಣಗಳನ್ನು ಖರೀದಿಸಲು ನಿರ್ದೇಶಕರು, ತಾಂತ್ರಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಪೀಠೋಪಕರಣಗಳ ಖರೀದಿಯನ್ನು ಮಾಡುವ ಮೊದಲಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣ ಸಂಖ್ಯೆ : ಶಿಇ 3329 ಐಎಫ್(ಬಿ)2009 ದಿನಾಂಕ 02–01–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಐ.ಎಫ್. ಮಾಗಿ)**

ಪಿ.ಆರ್.274

ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಿ.ಎಂ. ಹಿರೇಮಠ್, ಹಿಂದಿನ ವಿಶೇಷ ತಹಶೀಲ್ದಾರ್, (ಪ್ರಸ್ತುತ ನಿವೃತ್ತ) ಬಾಗಲಕೋಟೆ ನಗರಾಭಿವೃದ್ಧಿ ಪ್ರಾಧಿಕಾರ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ – ಅಂತಿಮ ಆದೇಶ

**ಓದಲಾಗಿದೆ:**
1. ಆಯುಕ್ತರು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರ ದಿನಾಂಕ 25–5-1999ರ ಅರೆ ಸರ್ಕಾರಿ ಪತ್ರ ಸಂಖ್ಯೆ : COMMR/LAQ/EST/CR-10/99-2000.
2. ದಿನಾಂಕ 29–9–1999ರ ತಿಳುವಳಿಕೆ ಪತ್ರ ಸಂಖ್ಯೆ: ಕಂಇ 33 ಎಡಿಇ99
3. ಶ್ರೀ ಸಿ.ಎಂ. ಹಿರೇಮಠ್, ಇವರ ದಿನಾಂಕ 9–3–2001ರ ಲಿಖಿತ ಹೇಳಿಕೆ
4. ಸರ್ಕಾರದ ಆದೇಶ ಸಂಖ್ಯೆ: ಕಂಇ:33:ಎಡಿಇ:99 ದಿನಾಂಕ 30–7–2001
5. ವಿಚಾರಣೆ ಅಧಿಕಾರಿಗಳ ವಿಚಾರಣಾ ವರದಿ ದಿನಾಂಕ 19–11–2007.
6. ಎರಡನೇ ಕಾರಣ ಕೇಳುವ ನೋಟಿಸು ದಿನಾಂಕ 2–6–2008
7. ಶ್ರೀ ಹಿರೇಮಠ್ ಇವರ ಲಿಖಿತ ಹೇಳಿಕೆ ದಿನಾಂಕ 8–7–2008
8. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಇ:2008: ಸಿಎನ್‌ಎಸ್:2008 ದಿನಾಂಕ 16–3–2009

**ಪ್ರಸ್ತಾವನೆ :**

ಶ್ರೀ ಸಿ.ಎಂ. ಹಿರೇಮಠ್, ವಿಶೇಷ ತಹಶೀಲ್ದಾರ್, ಬಿ.ಟಿ.ಡಿ.ಎ., ಬಾಗಲಕೋಟೆ ಇವರು ಕೃಷ್ಣಾ ಮೇಲ್ದಂಡೆ ಯೋಜನೆ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಇಲ್ಲಿ ವಿಶೇಷ ತಹಶೀಲ್ದಾರ್ ಆಗಿ ಸೇವೆ ಸಲ್ಲಿಸುತ್ತಿದ್ದಾಗ ಆಲಮಟ್ಟಿ ಜಲಾಶಯದ ಹಿನ್ನೀರಿನ ಮೊದಲನೇ ಹಂತದಲ್ಲಿ ಮುಳುಗಡೆಯಾಗಲಿರುವ ಬಾಗಲಕೋಟೆ ನಗರದ ವಿವಿಧ ಬಡಾವಣೆಗಳ ಸಂತ್ರಸ್ತ ಕುಟುಂಬಗಳಿಗೆ ಕಟ್ಟಡದ

ಪರಿಹಾರ ಧನ ನೀಡುವಲ್ಲಿ ಭಾರಿ ಪ್ರಮಾಣದ ಅಕ್ರಮ ವ್ಯವಹಾರಗಳು ನಡೆಯುತ್ತಿದೆ ಎಂಬ ಬಗ್ಗೆ ಖಚಿತ ದೂರವಾಣಿ ಮಾಹಿತಿ ಮೇರೆಗೆ ಶ್ರೀ ತುಷಾರ್ ಗಿರಿನಾಥ್, ಜನರಲ್ ಮ್ಯಾನೇಜರ್, ಯುಕೆಪಿ ಬಾಗಲಕೋಟೆ ರವರು ಶ್ರೀ ಸಿ.ಎಂ. ಹಿರೇಮಠ್ ಅವರು ವಾಸ್ತವ್ಯ ಹೂಡಿದ ಖಾಸಗಿ ಹೋಟೆಲೊಂದರ ಕೋಣೆಗೆ ಅನಿರೀಕ್ಷಿತ ಭೇಟಿ ನೀಡಿ ಅನೇಕ ದಾಖಲೆಗಳನ್ನು ವಶಪಡಿಸಿಕೊಂಡಿದ್ದು, ಹಾಗೂ ಸಂತ್ರಸ್ತ ಕುಟುಂಬಗಳಿಗೆ ಪರಿಹಾರ ಧನ ನೀಡಲಾಗಿದೆ ಎಂಬ ವಿಚಾರಣಾ ಅರ್ಜಿಗಳನ್ನು ಪುನರ್ವಸತಿ ಆಯುಕ್ತರಿಗೆ ರವಾನಿಸದೇ ತಾವೇ ಸ್ವೀಕರಿಸಿ ಹೆಚ್ಚಿನ ಪರಿಹಾರ ಧನ ನೀಡಲು ಶಿಫಾರಸ್ಸು ನೀಡಿದ ಕಾಗದ ಪತ್ರ ಹಾಗೂ ಪರಿಹಾರ ಧನ ಪಡೆಯಲು ಸುಮಾರು 30 ವೋಚರ್ ಹಾಗೂ ಪುನರ್ವಸತಿ ಇಲಾಖೆಯವರು ಸಿದ್ದಪಡಿಸಿದ ಅವಾರ್ಡಿನ ಜೆರಾಕ್ಸ್ ಪ್ರತಿಯನ್ನು ಶ್ರೀ ಸಿ.ಎಂ. ಹಿರೇಮಠ್ ಅವರಿಂದ ವಶಪಡಿಸಿಕೊಳ್ಳಲಾಗಿದೆ ಎಂದು, ನಂತರ ಶ್ರೀ ಹಿರೇಮಠ್‌ರವರ ಕಛೇರಿಯಲ್ಲಿ ಪರಿಹಾರ ಧನ ನೀಡುವಲ್ಲಿ ಮಧ್ಯವರ್ತಿಗಳ ಸೀಕ್ರೇಟ್ ಕೋಡ್ ನಂಬರಿನ ಡೈರಿಯೊಂದನ್ನು ವಶಪಡಿಸಿಕೊಳ್ಳಲಾಗಿದ್ದು, ಇದರಲ್ಲಿ ಮಧ್ಯವರ್ತಿಗಳ ಹೆಸರು ಸೇರಿದಂತೆ ಅಕ್ರಮಗಳಿಗೆ ಸಂಬಂಧಿಸಿದ ಹಲವಾರು ಪ್ರಮುಖ ದಾಖಲಾತಿಗಳು ಲಭ್ಯವಾಗಿದೆ ಎಂದು ಬಾಡಿಗೆದಾರರು ವಾಸಿಸುತ್ತಿರುವ ಮನೆಗಳ ಹೆಸರು ಬಡಾವಣೆ ಮತ್ತು ಖಾಲಿ ಜಾಗದ ಖರೀದಿ ಪತ್ರಗಳನ್ನು ವಶಪಡಿಸಿಕೊಳ್ಳಲಾಗಿದೆ ಎಂದು ವರದಿ ಮಾಡಿರುವ ಕೃಷ್ಣಾ ಮೇಲ್ದಂಡೆ ಯೋಜನೆ ಆಯುಕ್ತರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸುವಂತೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 25–05–99ರ ಅರೆ ಸರ್ಕಾರಿ ಪತ್ರದಲ್ಲಿ ಕೋರಿರುತ್ತಾರೆ.

1975ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಅಪೀಲು) ನಿಯಮಗಳ ಪ್ರಕಾರ ಸದರಿ ಆರೋಪಿತ ಅಧಿಕಾರಿಯ ಮೇಲಿನ ಆರೋಪದ ಬಗ್ಗೆ ದೋಷಾರೋಪಣೆ ಪಟ್ಟಿಯನ್ನು ಜಾರಿ ಮಾಡಿ ವಿವರಣೆಯನ್ನು ನೀಡಲು ಮೇಲೆ ಕ್ರಮಾಂಕ(2) ರಲ್ಲಿ ಓದಲಾದ ದಿನಾಂಕ 29–9–99ರ ತಿಳುವಳಿಕೆ ಪತ್ರದಲ್ಲಿ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಸಿ.ಎಂ. ಹಿರೇಮಠ್ ರವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 9–3–2001ರಲ್ಲಿ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ತಾವು ಯಾವ ಅಪರಾಧವನ್ನು ಮಾಡಿಲ್ಲವಾದ್ದರಿಂದ ತಮ್ಮ ವಿರುದ್ಧದ ವಿಚಾರಣೆಯನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಬೇಕೆಂದು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಆರೋಪಿತರ ವಿರುದ್ಧ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರಮಾಂಕ:(4)ರ ದಿನಾಂಕ: 30–07–2001ರ ಆದೇಶದಲ್ಲಿ ಬಳ್ಳಾರಿ ಜಿಲ್ಲಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಶಿಸ್ತು ಪ್ರಾಧಿಕಾರದ ಪರವಾಗಿ ವಿಚಾರಣೆಯನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮ 11(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಳ್ಳಾರಿ ಜಿಲ್ಲಾಧಿಕಾರಿಗಳ ಕಚೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆಯನ್ನು ಕೈಗೊಂಡು ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ 19–11–2007ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. 8 ಆರೋಪಗಳ ಪೈಕಿ 1ನೇ ಆರೋಪ ಸಾಬೀತಾಗಿದ್ದು, ಆರೋಪ 2,3,4 ಆರೋಪಗಳು ಸಾಬೀತಾಗಿರುವುದಿಲ್ಲ. 5ನೇ ಆರೋಪವು ಬಾಗಷ ಸಾಬೀತಾಗಿರುವುದು. 6ನೇ ಆರೋಪವು ಸಾಬೀತಾಗಿರುವುದಿಲ್ಲ. ಆರೋಪ 7 ಮತ್ತು 8 ಬಾಗಷಃ ಸಾಬೀತಾಗಿರುತ್ತದೆ. ಅದರಂತೆ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ 2–6–2008ರ ಎರಡನೇ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲಾಗಿತ್ತು. ಅದಕ್ಕೆ ಸದರಿ ಅಧಿಕಾರಿಯವರು ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ 8–7–2008ರಲ್ಲಿ ತಮ್ಮ ಸಮಜಾಯಿಷಿಯಲ್ಲಿ ಬಾಗಲಕೋಟೆ ಪಟ್ಟಣದಲ್ಲಿ ಸೂಕ್ತವಾದ ಮನೆ ಸಿಗದ ಪ್ರಯುಕ್ತ ಪದ್ಮನಾಭ ವಸತಿ ಗೃಹದಲ್ಲಿ ವಾಸವಾಗಿದ್ದ ಮೇಲಾಧಿಕಾರಿಗಳ ಆದೇಶದ ಮೂಲಕ ಕಛೇರಿಯ ಸಮಯದ ನಂತರ ತುರ್ತು ಕೆಲಸ ಮಾಡಲು ನಿರ್ದೇಶಿಸಿದಂತೆ ಕೆಲವು ಸಲ ಕಛೇರಿ ಕಾಗದ ಪತ್ರಗಳು ವಸತಿ ಗೃಹಕ್ಕೆ ತೆಗೆದುಕೊಂಡು ಹೋಗಿ ಕಾರ್ಯ ನಿರ್ವಹಿಸಲಾಗುತ್ತಿದೆ ಎಂದು ತಿಳಿಸಿ ಇದರಿಂದಾಗಿ ಸಾರ್ವಜನಿಕರಿಗೆ ಹಾಗೂ ಸರ್ಕಾರಕ್ಕೆ ಅನುಕೂಲಕರವಾಗಿದೆಯೆಂದು, ಯಾವುದೇ ದುರುದ್ದೇಶದಿಂದ ಇಟ್ಟುಕೊಂಡಿಲ್ಲವೆಂದು ತಿಳಿಸಿ ತಾವು ಸಮಾನಾಂತರ ಕಛೇರಿ ನಡೆಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಪರಿಹಾರ ಧನ ಚೆಕ್ಕುಗಳ ಯಾದಿಯ ಪ್ರತಿಗಳು ದ್ವಿಪ್ರತಿಯಲ್ಲಿ ಬರುತ್ತಿದ್ದು, ಒಂದು ಪ್ರತಿಯನ್ನು ವಿಷಯ ನಿರ್ವಾಹಕರಿಗೆ ಕೊಡಲಾಗುತ್ತಿತ್ತು ಇನ್ನೊಂದು ಪ್ರತಿಯನ್ನು ಅವರ ಬಳಿ ಇಟ್ಟುಕೊಳ್ಳಲಾಗುತ್ತಿತ್ತು ವಿನಹಃ ಮಧ್ಯ ವರ್ತಿಗಳ ಮುಖಾಂತರ ಸಂತ್ರಸ್ಥರನ್ನು ಸಂಪರ್ಕಿಸುವ ಸಲುವಾಗಿ ಅಲ್ಲವೆಂದು ಪರಿಹಾರ ಧನಕ್ಕೆ ಸಂತ್ರಸ್ಥರು ತಮ್ಮ ಓಚರ್‌ಗಳನ್ನು ಕಛೇರಿಯ ವಿಷಯ ನಿರ್ವಾಹಕರಿಗೆ ಸಲ್ಲಿಸಬೇಕಾಗಿದ್ದು, ಅವರು ಇಲ್ಲದ ಸಮಯದಲ್ಲಿ ಅವರ ನಂತರದ ಅಧಿಕಾರಿಯವರು ತಮಗೆ ಸಲ್ಲಿಸುತ್ತಿದ್ದರು. ಇದಲ್ಲದೆ ಮೇಲಾಧಿಕಾರಿಗಳ ಆದೇಶದಂತೆ ಓಚರ್‌ಗಳನ್ನು ಹಾಗೂ ನೋಟಿಸುಗಳನ್ನು ಸಂತ್ರಸ್ಥರಿಗೆ ಜಾರಿಮಾಡುವ ಕೆಲಸ ಉಸ್ತುವಾರಿ ಕೆಲಸವನ್ನು ಅವರಿಗೆ ವಹಿಸಿಕೊಟ್ಟಿದ್ದರಿಂದ ಅವುಗಳನ್ನು ತಮ್ಮ ಬಳಿ ಇಟ್ಟುಕೊಳ್ಳಬೇಕಾಯಿತ್ತೆಂದು ತಿಳಿಸಿ ಅವರ ವಿರುದ್ಧ ಎಲ್ಲಾ ಆರೋಪಗಳನ್ನು ಕೈಬಿಡುವಂತೆ ಕೋರಿರುತ್ತಾರೆ.

ವಿಚಾರಣಾ ವರದಿ ಹಾಗೂ ಆಪಾದಿತರ ಹೇಳಿಕೆಯನ್ನು ಪರಿಶೀಲಿಸಲಾಗಿ ಒಟ್ಟಾರೆ 8 ಆರೋಪಗಳನ್ನು ಕ್ರೋಢೀಕರಿಸಿ, ಪರಿಶೀಲಿಸಿದಾಗ ಸರ್ಕಾರದ ದಾಖಲೆಗಳನ್ನು ಅವರ ವಾಸ ಸ್ಥಳದಲ್ಲಿ ಅಕ್ರಮವಾಗಿ ಇಟ್ಟುಕೊಂಡಿರುವುದು ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಆದುದರಿಂದ ಅವರ ನಿವೃತ್ತಿ ವೇತನದಲ್ಲಿ ಶೇಕಡ 10ರಷ್ಟನ್ನು 2 ವರ್ಷಗಳಿಗೆ ಕಡಿತಗೊಳಿಸಲು ದಂಡನೆ ವಿಧಿಸಲು ತೀರ್ಮಾನಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ದಿನಾಂಕ 18–8–2009ರಲ್ಲಿ ಶ್ರೀ ಸಿ.ಎಂ. ಹಿರೇಮಠ್ ತಹಶೀಲ್ದಾರ್ ಇವರ ನಿವೃತ್ತಿ ವೇತನದಿಂದ ಶೇಕಡ 10ರಷ್ಟನ್ನು 2 ವರ್ಷ ಕಡಿತಗೊಳಿಸಲು ಕರ್ನಾಟಕ ಲೋಕಸೇವಾ ಆಯೋಗವು ಸಹಮತಿ ನೀಡಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಶ್ರೀ ಸಿ.ಎಂ.ಹಿರೇಮಠ್ ತಹಶೀಲ್ದಾರ್ ನಿವೃತ್ತಿ ಇವರ ನಿವೃತ್ತಿ ವೇತನದಿಂದ ಶೇಕಡ 10ರಷ್ಟನ್ನು 2 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 33 ಎಡಿಇ 99, ಬೆಂಗಳೂರು, ದಿನಾಂಕ 21ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಎಂ. ಹಿರೇಮಠ್ ಹಿಂದಿನ ವಿಶೇಷ ತಹಶೀಲ್ದಾರ್ ಬಾಗಲಕೋಟೆ ನಗರಾಭಿವೃದ್ಧಿ ಪ್ರಾಧಿಕಾರ ಪ್ರಸ್ತುತ ನಿವೃತ್ತರು ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದರಿಂದ ದಿನಾಂಕ 19-11-2007 ರ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ, ಶ್ರೀ ಸಿ.ಎಂ. ಹಿರೇಮಠ್ ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(1)(ಎ) ಅನ್ವಯ ಅವರ ನಿವೃತ್ತಿ ವೇತನದಿಂದ ಶೇಕಡ 10ರಷ್ಟನ್ನು ಎರಡು ವರ್ಷಗಳವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.275

**(ಎಸ್. ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇ–3)

## PARLIAMENTARY AFFAIRS AND LEGISLATION SECRETARIAT

Sub :- Re-constitution of Official Language (Legislative) Commission-reg.

Read :-
1. Government Order No. LAW 4 LMP 97, dated: 04-07-1997.
2. Government Order No.SAMVYASHAE 01 LMP 99, dated: 05-06-1999.
3. Government Order No. SAMVYASHAE 1 LMP 2000, dated: 12-04-2001.
4. Government Order No. SAMVYASHAE 10 BHANIVI 2002, dated: 22-04-2002.
5. Government Order No. SAMVYASHAE 18 BHANIVI 2003, dated: 04-09-2003.
6. Government Order No. SAMVYASHAE 44 BHANIVI 2005, dated: 14-10-2005.
7. Government Order No. SAMVYASHAE 18 BHANIVI 2006, dated: 08-12-2006.
8. Letter No. BHANI 30/Adalita/RABHA (VI) A/2009 dated 30-09-2009 from the Director, Directorate of Translation.

**Preamble:**

In the Government Order read at (1) above, the term of office of the Karnataka Official Language (Legislative) Commission was extended upto 31st January, 1999.

In the Government Order read at (2) above, the term of office continued for one year from 1st February 1999.

In the Government Order read at (3) above, the term of office of the Commission continued upto 30-05-2001.

In the Government Order read at (4) above, the term of office of the Commission continued upto 30-05-2003.

In the Government Order read at (5) above, the Commission was reconstituted and its term was extended upto 30-05-2006.

In the Government Order read at (6) above, the Commission was reconstituted and its term continued upto 30-05-2006.

In the Government Order read at (7) above, the Commission was reconstituted and its term continued upto 08-12-2009.

In the proposal read at (8), the Director of Translations has sent the proposal for reconstitution of the Commission, consisting of One Chairman limiting the number of members to three or four. The said proposal was considered and it was decided to reconstitute the Commission with effect from 08-12-2009 for the period three years or until further Order, whichever is earlier. Hence this Order.

**Government Order No. SAMVYASHAE 52 BHANIVI 2009 Bangalore, dated : 16-12-2009.**

The Official Language (Legislative) Commission has been reconstituted consisting the following members with effect from 08-12-2009 for the period of three years or until further Order, whichever is earlier:

| | | |
|---|---|---|
| 1. | Sri Belur Javarayya<br>Retired Director, Directorate of Translations,<br>No. 11/69, Sarvabhouma Nagar, 7th Main 'A' Cross,<br>Chikkalasandra, Bangalore-560 001. | Chairman |
| 2. | Srimati K.N. Jayashree<br>Retired Director, Directorate of Translations,<br>Varija, No. 1/2, First Floor, Netaji Road, Tyagaraja Nagar,<br>Bangalore-28. | Member |
| 3. | Sri Venkataramaiah<br>Retired Director, Directorate of Translations<br>No. 853, Kere Angala, 11th Section, Nagarbhavi, 2nd stage<br>Bangalore. | Member |
| 4. | Sri S. Ramarao<br>Retired Director, Directorate of Translations<br>No. 339, 4th Cross, Vidyamanyanagar, Andrahalli, Vishvaneedam<br>Post, Bangalore-560 091. | Member |
| 5. | Sri M.Y. Dodamani<br>Reitred Director, Directorate of Translations<br>No. 448, West of Chord Road, 2nd Stage, Mahalaxmipuram<br>Bangalore-560 086. | Member |

The service conditions of the Chairman and the non-official members of the Commission are governed by the existing Orders during this period.

The expenditure incurred by this Commission shall be borne under the Head of Account 2052-SECRETARIAT – GENERAL SERVICE – 092-08-Sub-Head of Account 059- DIRECTOR OF TRANSLATION-OFFICIAL LANGUAGE (LEGISLATIVE) COMMISSION-(NON-PLANNED).

This Order has been issued with the concurrence of the Finance Department Note No. FD 547 Expenditure-10/2009 dated 10-12-2009.

By Order and in the name of the Governor of Karnataka

**(G. SRIDHAR)**
Assistant Draftsman and Ex-officio
Deputy Secretary to Government
Department of Parliamentary Affairs and Legislation.

PR NO. 316

**ಕಂದಾಯ ಸಚಿವಾಲಯ**

ವಿಷಯ : ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಚಿತ್ತಾಪುರ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ.

ಓದಲಾಗಿದೆ :

1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 57 ಎಡಿಇ 2008, ದಿನಾಂಕ : 2–2–2007.
2. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 57 ಎಡಿಇ 05, ದಿನಾಂಕ : 23–3–2009.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಗುಲ್ಬರ್ಗಾರವರ ಪತ್ರ ಸಂ.: ಕಂದಾಯ/ಶಿಸ್ತು/23/2003–04, 18119, ದಿ : 21–11–2009.

ಪ್ರಸ್ತಾವನೆ :

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ದೊಣ್ಣೂರು ಗ್ರಾಮದ ಸ.ನಂ.: 16ರಲ್ಲಿ 10 ಎಕರೆ 19 ಗುಂಟೆ ಜಮೀನನ್ನು ಭೂ ನ್ಯಾಯ ಮಂಡಳಿ ವತಿಯಿಂದ ಶ್ರೀಮತಿ ಕಮಲಾಬಾಯಿ ಎಂಬುವವರಿಗೆ ಮಂಜೂರಾಗಿದ್ದು, ಅದರಂತೆ ಅವರ ಹೆಸರಿನಲ್ಲಿ

ಪಹಣಿ ಮತ್ತು ಅದರ ದಾಖಲೆಗಳನ್ನು ಹೊಂದಿದ್ದರೂ ಸಹ ಸೇಡಂ ಉಪವಿಭಾಗಾಧಿಕಾರಿಯವರ ಆದೇಶದಂತೆ, ಈ ಜಮೀನಿನ ಮೊದಲನೇ ಮಾಲೀಕರಾದ ಶ್ರೀ ಅಣ್ಣಾರಾವ್ ತಂದೆ ಸದಾಶಿವಪ್ಪ ಎಂಬುವವರ ಹೆಸರಿಗೆ ಪಹಣಿ ಹಾಗೂ ಖಾತೆಯನ್ನು ಬದಲಾವಣೆ ಮಾಡಿರುತ್ತಾರೆಂಬ ಕಾರಣಕ್ಕಾಗಿ ಚಿತ್ತಾಪುರ ತಾಲ್ಲೂಕು ತಹಶೀಲ್ದಾರರಾದ ಶ್ರೀ ಆರ್.ಎಂ. ನಾಟೀಕರ್, ಕಂದಾಯ ನಿರೀಕ್ಷಕರು ಶ್ರೀ ಕಂಠೆಪ್ಪ ಹಾಗೂ ಶ್ರೀ ಸುಭಾಷ್‌ಚಂದ್ರ ಗ್ರಾಮಲೆಕ್ಕಿಗ ಇವರುಗಳ ಮೇಲೆ ಹೊರಿಸಿದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ನ್ಯಾಯಾಧೀಶರು, ಗದಗ್ ಇವರ ಬದಲು ಶ್ರೀ ಪಿ.ಜಿ. ಕುಲಕರ್ಣಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೀದರ್ ಜಿಲ್ಲೆ ಇವರನ್ನು ಮೇಲೆ ಕ್ರ.ಸಂ. 1 ರಲ್ಲಿ ದಿನಾಂಕ: 02–02–2007ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಆದರೆ, ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ಶ್ರೀ ಪಿ.ಜಿ. ಕುಲಕರ್ಣಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಯವರು ಬೀದರ್‌ನಲ್ಲಿ ವಾಸವಾಗಿರದೆ ಮಹಾರಾಷ್ಟ್ರದ ಪುಣೆಯಲ್ಲಿ ವಾಸವಾಗಿರುವುದರಿಂದ ಅವರ ಬದಲಿಗೆ ಶ್ರೀ ಎಸ್.ಎಸ್. ಪಾಟೀಲ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬಿಜಾಪುರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಜಿಲ್ಲಾಧಿಕಾರಿ, ಗುಲ್ಬರ್ಗಾರವರು ಶ್ರೀ ಎಸ್.ಎಸ್. ಪಾಟೀಲ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬಿಜಾಪುರ ಇವರು ತಮ್ಮ ವೈಯಕ್ತಿಕ ಕೆಲಸ ಹಾಗೂ ಆರೋಗ್ಯವು ಸರಿ ಇಲ್ಲದ ನಿಮಿತ್ತ ವಿಚಾರಣೆ ಮಾಡಲು ಆಗುವುದಿಲ್ಲವೆಂದು ತಿಳಿಸಿರುವುದರಿಂದ ಬೇರೆ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳೆಂದು ನೇಮಿಸಲು ಕೋರಿದ್ದಾರೆ.

ಆದ್ದರಿಂದ ವಿಚಾರಣಾಧಿಕಾರಿ ಬದಲಾವಣೆ ಕೋರಿಕೆಯನ್ನು ಸರ್ಕಾರವು ಪರಿಗಣಿಸಿ, ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಅಡಿಷನಲ್ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಧರಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 57 ಎಡಿಇ 2005, ಬೆಂಗಳೂರು, ದಿನಾಂಕ: 27ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್ ಚಿತ್ತಾಪುರ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಅಡಿಷನಲ್ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಉಳಿದ ಅಂಶಗಳು ಸರ್ಕಾರದ ಆದೇಶ ಸಂ: ಆರ್‌ಡಿ 57 ಎಡಿಇ 2005, ದಿನಾಂಕ: 23–03–2009ರಲ್ಲಿರುವಂತೆ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 317

**(ಎಸ್.ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

### ತಿದ್ದುಪಡಿ ಆದೇಶ

ಸಂಖ್ಯೆ: ಕಂಇ 07 ಎಲ್‌ಆರ್‌ಎ 2009, ಬೆಂಗಳೂರು, ದಿನಾಂಕ 19–01–2010.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 48 ಎಲ್‌ಆರ್‌ಎ 2008 ದಿನಾಂಕ: 13–10–08ರ ಪಟ್ಟಿಯ ಕ್ರ.ಸಂ. 22 ರಲ್ಲಿ "ಬೀದರ್ ದಕ್ಷಿಣ ತಾಲ್ಲೂಕು" ಎಂಬುದರ ಬದಲಾಗಿ "ಬೀದರ್ ತಾಲ್ಲೂಕು" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 318

**(ಟಿ. ಎನ್. ನಾರಾಯಣ ಗೌಡ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಸುಧಾರಣೆ)

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ನಗರ, ಮಲ್ಲೇಶ್ವರಂನಲ್ಲಿರುವ ಶ್ರೀ ಸರ್ಕಲ್ ಮಾರಮ್ಮ ದೇವಾಲಯದ ಆಡಳಿತ ನಿರ್ವಹಣೆಯ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯವರ ಪತ್ರ ಸಂಖ್ಯೆ: ಎಡಿಎಂ 8 ಸಿಆರ್ 225/2007–08 ದಿನಾಂಕ: 11–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯವರ ಪತ್ರ ದಿನಾಂಕ: 11–12–2009ರಲ್ಲಿ ಬೆಂಗಳೂರು ನಗರ, ಮಲ್ಲೇಶ್ವರಂ ಬಡಾವಣೆಯ 18ನೇ ಕ್ರಾಸ್‌ನಲ್ಲಿರುವ ಶ್ರೀ ಸರ್ಕಲ್ ಮಾರಮ್ಮ ದೇವಸ್ಥಾನದ ಆಡಳಿತದಲ್ಲಿ ನಡೆಯುತ್ತಿದೆ ಎನ್ನಲಾದ ಅವ್ಯವಹಾರದ ಬಗ್ಗೆ ಕರ್ನಾಟಕ ಹಿಂದೂ ಧಾರ್ಮಿಕ ದತ್ತಿ ಕಾಯ್ದೆ ಸಂಸ್ಥೆಗಳು ಮತ್ತು ಅಧಿನಿಯಮ 1997 ನಿಯಮಾವಳಿಗಳು – 2002 ಸೆಕ್ಷನ್ 43 ರಂತೆ ಪರಿಶೀಲಿಸಿ ವರದಿ ಸಲ್ಲಿಸುವಂತೆ ಜಿಲ್ಲಾಧಿಕಾರಿಗಳನ್ನು ಕೋರಲಾಗಿತ್ತು. ಜಿಲ್ಲಾಧಿಕಾರಿಗಳು ಹಾಗೂ ಉಪವಿಭಾಗಾಧಿಕಾರಿಗಳು ನೀಡಿರುವ ತನಿಖಾ ವರದಿಯನ್ವಯ ಪ್ರಸ್ತಾಪಿತ ದೇವಾಲಯದಲ್ಲಿ ಶ್ರೀ ಶ್ರೀನಿವಾಸ ಎಂಬುವರು ಸ್ವಯಂ ಘೋಷಿತ ವ್ಯವಸ್ಥಾಪಕರಾಗಿದ್ದು, ದೇವಾಲಯದ ಎಲ್ಲಾ ಆಡಳಿತ ವ್ಯವಹಾರಗಳನ್ನು ನಡೆಸುತ್ತಿದ್ದಾರೆಂದು ಭಕ್ತಾಧಿಗಳಿಂದ ಸ್ವೀಕರಿಸಿದ ಬೆಲೆ ಬಾಳುವ ಕಾಣಿಕೆಗಳ ಬಗ್ಗೆ ಯಾವುದೇ ಲೆಕ್ಕ ಪತ್ರಗಳನ್ನು ನಿರ್ವಹಿಸಿರುವುದಿಲ್ಲವೆಂದೂ ಮತ್ತು ದೇವಾಲಯದ ಆಡಳಿತ ನಿರ್ವಹಣೆ ಬಗ್ಗೆ ಲೆಕ್ಕ ಪರಿಶೋಧನೆ ನಡೆಸಿದ ಬಗ್ಗೆಯೂ ಸಹ ಯಾವುದೇ ಮಾಹಿತಿ ನೀಡಿಲ್ಲವೆಂದು, ಇದರಿಂದ ದೇವಾಲಯದ ಹಣದ ದುರುಪಯೋಗವಾಗಿರುವುದು ದೃಢಪಟ್ಟಿರುತ್ತದೆ. ಅಲ್ಲದೆ, ಹಲವಾರು ಬಾರಿ ನೋಟಿಸು ನೀಡಿದ್ದಾಗ್ಯೂ ತನಿಖಾ ಸಮಯದಲ್ಲಿ ಸಂಸ್ಥೆಯ ಆಡಳಿತದವರು ಯಾವುದೇ ದಾಖಲು ವಹಿ, ಆಸ್ತಿ ವಿವರವನ್ನು ಹಾಜರುಪಡಿಸದೇ ಇರುವುದು ಕಂಡು ಬಂದಿದೆಯೆಂದು ಜಿಲ್ಲಾಧಿಕಾರಿಗಳು ವರದಿಯಿಂದ ತಿಳಿದು ಬಂದಿರುತ್ತದೆ.

ಆದ್ದರಿಂದ ಜಿಲ್ಲಾಧಿಕಾರಿಗಳ ಕೋರಿಕೆಯಂತೆ ಕರ್ನಾಟಕ ಹಿಂದೂ ಧಾರ್ಮಿಕ ದತ್ತಿ ಕಾಯ್ದೆ ಸಂಸ್ಥೆಗಳು ಮತ್ತು ಅಧಿನಿಯಮ 1997ರ ನಿಯಮಾವಳಿಗಳು – 2002 ಸೆಕ್ಷನ್ 43 ರಂತೆ ಸಂಸ್ಥೆಯನ್ನು ಘೋಷಿತ ಸಂಸ್ಥೆಯೆಂದು ಘೋಷಿಸಲು ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ. ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 01 ಮುಅಬಿ 2010, ಬೆಂಗಳೂರು, ದಿನಾಂಕ: 23ನೇ ಜನವರಿ 2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬೆಂಗಳೂರು ನಗರ, ಮಲ್ಲೇಶ್ವರಂ ಬಡಾವಣೆಯ 18ನೇ ಕ್ರಾಸ್‌ನಲ್ಲಿರುವ ಶ್ರೀ ಸರ್ಕಲ್ ಮಾರಮ್ಮ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಕಾಯ್ದೆ 1997ರ ಸೆಕ್ಷನ್ 43 ರನ್ವಯ ಘೋಷಿತ ಸಂಸ್ಥೆ ಎಂದು ಘೋಷಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 319

**(ಜಿ. ರಾಮಚಂದ್ರಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**FOREST, ECOLOGY & ENVIRONMENT SECRETARIAT**

Sub :- Permission for capture of wild elephants in Hassan District – Constitution of a committee – reg.

Read :-
1. Letters No.: FEE 298 FWL 2006, dated: 17-09-2007, 11-12-2007 and 20-03-2009 Govt. of Karnataka addressed to the Ministry of Environment and Forests, New Delhi.
2. Letter No.: C2//CWL/CR 39/05-06, dt: 07-11-2009 of Additional Principal Chief Conservator of Forests (Wildlife) and Chief Wildlife Warden, Government of Karnataka.
3. Letter No.: F.No. 2-5/02-PE, dt: 04-12-2009 of the Ministry of Environment and Forests (Project Elephant), Government of India, New Delhi.

4. Letter No.: C2/CWL/CR39/09-10, dt: 19-12-2009 of Additional Principal Chief Conservator of Forests (Wildlife) and Chief Wildlife Warden, Government of Karnataka.

**Preamble:**

In the letters No. FEE 298 FWL 2006, dt: 17-09-2007, 11-12-2007 and 20-03-2009 read at (1) above, Government has requested the Ministry of Environment and Forests, New Delhi to accord approval of the Government of India for capture and translocation of 25 wild elephants in Hassan district.

2. In the letter dated 07-11-2009 read at (2) above the Additional Principal Chief Conservator of Forests (Wildlife) and Chief Wildlife Warden of Karnataka has requested the approval of Ministry of Environment and Forests (Project Elephant), Government of India, New Delhi enclosing a detailed action plan for the capture and translocation of 25 wild elephants in Hassan district.

3. In the letter dated 04-12-2009 read at (3) above the Ministry of Environment and Forests (Project Elephant), Government of India, New Delhi have conveyed their approval under Section 11 of the Wildlife (protection) Act, 1972 to capture and translocate two wild elephants from Hassan district in the first phase and stated that this permission for capture and translocation is subject to following conditions in addition to what has already been proposed in the action plan of the State Government.

a) A Committee consisting of State Forest Department representative, Dr. Ajai Desai, Member, Steering Committee, Project Elephant and a representative of the local NGO will identify the two problematic elephants to be captured in the first phase.

b) The captured elephant should be radio-collared before being released in the wild so that they can be monitored. For collaring and monitoring, assistance of a research institute should be taken.

c) Before carrying out capture of the two elephants, the exact location for its release in Bandipur or Nagarhole should be identified.

d) For monitoring of the entire process of capture and release, Committee consisting of Dr. Ajay Desai, representative of the Wildlife Institute of India, Dehradun and Chief Wildlife Warden should be constituted.

e) The permission for the capture of more elephants would be considered after successful implementation of this permission and after receipt of the preliminary Monitoring Report from the Institute engaged for the Monitoring purpose.

4. In the Letter dated 19-12-2009 read at (4) above the Additional Principal Chief Conservator of Forests (Wildlife) and Chief Wildlife Warden of Karnataka has requested to constitute a committee for capturing and translocation of two wild elephants in Hassan district as follows:-

| | | |
|---|---|---|
| 1. | Chief Conservator of Forests (Proejct Elephant), Mysore | Chairman |
| 2. | Dr. Ajay Desai, Member Streering Committee, Project Elephant | Member |
| 3. | Representative of Wildlife Institute of India, Dehradun | Member |
| 4. | Sri. Hemmige Mohan, Hassan | Member |
| 5. | Conservator of Forests, Hassan | Member |
| 6. | Deputy Conservator of Forests, Hassan | Member Secretary |

Hence the following Order:

**Government Order No. FEE 298 FWL 2006(P), Bangalore, dated : 20-01-2010.**

For the reasons explained in the preamble, Government is pleased to constitute the following committee for capture and translocation of two wild elephants from Hassan district in the first phase subject to conditions explained in the preamble in addition to the conditions mentioned in the action plan of the State Government.

| | | |
|---|---|---|
| 1. | Chief Conservator of Forests (Project Elephant), Mysore | Chairman |
| 2. | Dr. Ajay Desai, Member Steering Committee, Project Elephant | Member |
| 3. | Representative of Wildlife Institute of India, Dehradun | Member |
| 4. | Sri. Hemmige Mohan, Hassan | Member |
| 5. | Conservator of Forests, Hassan | Member |
| 6. | Deputy Conservator of Forests, Hassan | Member Secretary |

By Order and in the name of the Governor of Karnataka

**(AHMED A. MOKHTADAR)**
Deputy Secretary to Government
Forest, Ecology & Environment Department.

PR NO. 320

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಂ. ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರು ಅವರಿಗೆ ಇಲಾಖಾ ವಿಚಾರಣೆ ನಡೆಸಿದ ಸಂಬಂಧ ಗೌರವಧನ ಮತ್ತು ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 195 ಎಸ್‌ಇಎನ್ 2007, ದಿನಾಂಕ : 13-03-2009

2) ಶ್ರೀ ಎಂ. ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರ ದಿನಾಂಕ : 11-1-2010 ರ ವಿಚಾರಣಾ ವರದಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 13-03-2009ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ವಿ. ರಮೇಶ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ (ಪ್ರಸ್ತುತ ಅಮಾನತ್ತಿನಲ್ಲಿ) ಇವರು ಕಾರ್ಯ ನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತಿ, ಯಳಂದೂರು, ಚಾಮರಾಜನಗರ ಜಿಲ್ಲೆ ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಸರ್ಕಾರದ ಅನುಮತಿ ಪಡೆಯದೆ ಶ್ರೀ ಕೆ.ವಿ. ಅನಂತರಾಮು, ನಿವೃತ್ತ ಶಿಕ್ಷಕರಿಗೆ ರೂ. 3.00 ಲಕ್ಷಗಳ ಸಾಲ ನೀಡಿ ಬಡ್ಡಿ ವ್ಯವಹಾರ ನಡೆಸಿದ ಹಾಗೂ ನಿಗಧಿತವಾಗಿ ಸ್ಥಿರಾಸ್ತಿ/ಚರಾಸ್ತಿಗಳ ಪಟ್ಟಿಯನ್ನು ಸಲ್ಲಿಸದೆ ಉಳಿದ ಆರೋಪಕ್ಕಾಗಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎಂ. ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ : 11-01-2010ರ ವಿಚಾರಣಾ ವರದಿ ಹಾಗೂ ಮುಂಗಡ ರಶೀತಿಗಳನ್ನು ಸಲ್ಲಿಸಿದ್ದಾರೆ. ಅವರಿಗೆ ಸಂಭಾವನೆ ಹಾಗೂ ಸಾರಿಗೆ ಭತ್ಯೆಗಳನ್ನು ಮಂಜೂರು ಮಾಡುವ ಸಲುವಾಗಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 195 ಎಸ್‌ಇಎನ್ 2007, ಬೆಂಗಳೂರು, ದಿನಾಂಕ 21ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ. ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 22 ಸೇಇವಿ 2007, ದಿನಾಂಕ : 11-04-2008ರಲ್ಲಿ ನಿಗಧಿಪಡಿಸಿರುವಂತೆ ರೂ. 8,000ಗಳ ಗೌರವಧನ ಹಾಗೂ ರೂ. 1,500ಗಳ ವಾಹನ ಭತ್ಯೆಯನ್ನು ಪಾವತಿ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2009-10ರ ಆಯವ್ಯಯ ಲೆಕ್ಕಶೀರ್ಷಿಕೆ-2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01- ಕರ್ನಾಟಕ ಸರ್ಕಾರ ಸಚಿವಾಲಯ-051-ಸಾಮಾನ್ಯ ವೆಚ್ಚಗಳು ಇದರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ. (ಸೇವೆಗಳು-3)

ಪಿ.ಆರ್.251

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಖನಿಜ ಭವನ, ಬೆಂಗಳೂರು ಇವರಿಗೆ ದಿನಾಂಕ 7/9ನೇ ಜನವರಿ 2010 ರಂದು ವಿಜ್ಞಾನ ಭವನ, ನವದೆಹಲಿಯಲ್ಲಿ ನಡೆಯುವ 8ನೇ ಪ್ರವಾಸಿ ಭಾರತೀಯ ದಿವಸ ಕಾರ್ಯಕ್ರಮದಲ್ಲಿ ಭಾಗವಹಿಸಲು ಅನುದಾನ ಮಂಜೂರಾತಿ ಮಾಡುವ ಬಗ್ಗೆ.

**ಓದಲಾಗಿದೆ :** 1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ : ಕಉಮಿ/ಇ3/2513/ಪಿಬಿಡಿ/2010 ದಿನಾಂಕ : 21–12–2009.

2) ಸರ್ಕಾರದ ಆದೇಶ ಸಂಖ್ಯೆ : ಸಿಐ 116 ಎಸ್‌ಪಿಐ 2009 ದಿನಾಂಕ : 05–06–2009.

3) ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ : ಎಇಪಿ:ಇಪಿಸಿ:ಎ 1:73:2009–10 ದಿನಾಂಕ : 22–12–2009.

**ಪ್ರಸ್ತಾವನೆ :**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಖನಿಜ ಭವನ, ಬೆಂಗಳೂರು ಇವರಿಗೆ ದಿನಾಂಕ 7/9ನೇ ಜನವರಿ 2010 ರಂದು ವಿಜ್ಞಾನ ಭವನ, ನವದೆಹಲಿಯಲ್ಲಿ ನಡೆಯುವ 8ನೇ ಪ್ರವಾಸಿ ಭಾರತೀಯ ದಿವಸ ಕಾರ್ಯಕ್ರಮದಲ್ಲಿ ಭಾಗವಹಿಸಲು ಅನುದಾನ ಮಂಜೂರಾತಿಗಾಗಿ ಕೋರಿ ಮೇಲೆ ಓದಲಾದ (1)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರಿಗೆ ದಿನಾಂಕ : 7/9ನೇ ಜನವರಿ 2010 ರಂದು ವಿಜ್ಞಾನ ಭವನ, ನವದೆಹಲಿ ಇಲ್ಲಿ ನಡೆಯುವ 8ನೇ ಪ್ರವಾಸಿ ಭಾರತೀಯ ದಿವಸ ಕಾರ್ಯಕ್ರಮದಲ್ಲಿ ಭಾಗವಹಿಸಲು ಕೋರಿರುವ ರೂ. 15.00 ಲಕ್ಷಗಳ ಮೊತ್ತವನ್ನು, ಈಗಾಗಲೇ ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರಿಗೆ ಜರ್ಮನಿ ಮತ್ತು ಆಸ್ಟ್ರಿಯಾ ದೇಶಗಳಲ್ಲಿನ ಗೋಬಲ್ ಇಂಡಿಯಾ ಬಿಸಿನೆಸ್ ಮೀಟ್ ಕಾರ್ಯಕ್ರಮಕ್ಕಾಗಿ ಲೆಕ್ಕಶೀರ್ಷಿಕೆ 2852–80–800–0–46ರ ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆಯಡಿ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ರೂ. 53.00 ಲಕ್ಷಗಳು ಮಂಜೂರಾಗಿದ್ದು, ಇದರಲ್ಲಿ ರೂ. 30,86,120/–ಗಳ ಮೊಬಲಗು ಮಾತ್ರ ಖರ್ಚಾಗಿರುವುದು. ಅದರಂತೆ ಉಳಿದ ರೂ. 22,13,880/– ಗಳಲ್ಲಿ ರೂ. 15.00 ಲಕ್ಷಗಳ (ಹದಿನೈದು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಉಪಯೋಗಿಸಲು ಅನುಮತಿ ನೀಡಿ ಸರ್ಕಾರಿ ಆದೇಶವನ್ನು ಹೊರಡಿಸಲು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ಕೋರಿರುತ್ತಾರೆ.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಕ್ರಮ ಸಂಖ್ಯೆ : ಸಿಐ 338 ಎಸ್‌ಪಿಐ 2009, ಬೆಂಗಳೂರು, ದಿನಾಂಕ : 6ನೇ ಜನವರಿ 2010**

ದಿನಾಂಕ 7/9ನೇ ಜನವರಿ 2010 ರಂದು ವಿಜ್ಞಾನ ಭವನ, ನವದೆಹಲಿಯಲ್ಲಿ ನಡೆಯುವ 8ನೇ ಪ್ರವಾಸಿ ಭಾರತೀಯ ದಿವಸ ಕಾರ್ಯಕ್ರಮದಲ್ಲಿ ಕರ್ನಾಟಕ ಉದ್ಯೋಗ ಮಿತ್ರ, ಖನಿಜ ಭವನ, ಬೆಂಗಳೂರು ರವರು ಭಾಗವಹಿಸಲು ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಸಿಐ 116 ಎಸ್‌ಪಿಐ 2009 ದಿನಾಂಕ : 05–06–2009 ರಲ್ಲಿ ಬಿಡುಗಡೆ ಮಾಡಿರುವ ರೂ. 53.00 ಲಕ್ಷಗಳಲ್ಲಿ ಖರ್ಚಾಗದೇ ಉಳಿದಿರುವ ರೂ. 22,13,880/– ಗಳಲ್ಲಿ ರೂ. 15.00 ಲಕ್ಷಗಳ ಅನುದಾನವನ್ನು ಸದರಿ ಕಾರ್ಯಕ್ರಮಕ್ಕೆ ಉಪಯೋಗಿಸಲು ಈ ಮೂಲಕ ಅನುಮತಿ ನೀಡಲಾಗಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಸರ್ಕಾರದ ಉಪಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಟಿಪ್ಪಣೆ ಸಂಖ್ಯೆ : ವಾಕೈ 242 ಆಂಆಸ (2) 2009 ದಿನಾಂಕ : 04–01–2010 ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಪರ್ಣ ಪಾವಟೆ**

ಪೀಠಾಧಿಕಾರಿ (ತಾಂತ್ರಿಕ ಕೋಶ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್.252

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎ.ಜಿ. ನಾಯ್ಕ, ಹಿಂದಿನ ತಹಶೀಲ್ದಾರ್, ಯಲ್ಲಾಪುರ, ಪ್ರಸ್ತುತ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಗಳೂರು ಇವರ ಪತ್ನಿಯ ವೈದ್ಯಕೀಯ ವೆಚ್ಚ ಮರುಪಾವತಿ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂ:ಎಸಿಟಿ–3–ಇತರೆ:ಸಿ.ಆರ್. 44:2007–08, ದಿ: 18–02–2008.

2) ಸರ್ಕಾರದ ಪತ್ರ ಸಂ : ಆರ್‌ಡಿ 210 ಎಎಸ್‌ಡಿ 2008, ದಿನಾಂಕ : 11–06–2008.

3) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂ : ಎಂಡಿಎ/ಎನ್‌ಡಿ/317/08–09, ದಿನಾಂಕ : 23–01–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ : 18–02–2008 ರಲ್ಲಿ ಶ್ರೀ ಎ.ಜಿ.ನಾಯ್ಕ, ತಹಶೀಲ್ದಾರ್, ಯಲ್ಲಾಪುರ ಇವರು ತಮ್ಮ ಪತ್ನಿಯ ಗರ್ಭಕೋಶದ ಶಸ್ತ್ರ ಚಿಕಿತ್ಸೆಯನ್ನು ಮಾಡಿಸಲು ತಗುಲಿದ ವೆಚ್ಚ ರೂ. 13,693–00 ಗಳನ್ನು ಮರು ಮಂಜೂರಿ ಕುರಿತು ಸಲ್ಲಿಸಿದ ಪ್ರಕರಣವನ್ನು ಸದರಿಯವರು ಚಿಕಿತ್ಸೆ ಪಡೆದ ಆಸ್ಪತ್ರೆ ಆಧಿಸೂಚಿತವಲ್ಲ ಎಂಬ ಕಾರಣಕ್ಕಾಗಿ ಜಿಲ್ಲಾ ಶಸ್ತ್ರ ಚಿಕಿತ್ಸಕರು ಕಾರವಾರ ರವರ ಅಭಿಪ್ರಾಯದಂತೆ ಸಹಾಯಕ ಕಮೀಷನರ್, ಸಿರ್ಸಿರವರು ಪ್ರಕರಣವನ್ನು ಹಿಂದಿರುಗಿಸಿದ್ದರಿಂದ, ಸದರಿ ವೈದ್ಯಕೀಯ ವೆಚ್ಚವನ್ನು ಮರು ಪಾವತಿಸಲು ವಿಶೇಷ ಸಂದರ್ಭವೆಂದು ಪರಿಗಣಿಸಿ ಮಂಜೂರಾತಿ ನೀಡಲು ಸರ್ಕಾರಕ್ಕೆ ಕೋರುವಂತೆ ತಹಶೀಲ್ದಾರ್ ಯಲ್ಲಾಪುರರವರು ಸಹಾಯಕ ಕಮೀಷನರ್, ಸಿರ್ಸಿರವರ ಮೂಲಕ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಶ್ರೀ ಎ.ಜಿ. ನಾಯ್ಕ, ತಹಶೀಲ್ದಾರ್, ಯಲ್ಲಾಪುರ ಇವರು ತಮ್ಮ ಪತ್ನಿಯ ಗರ್ಭಕೋಶದ ಶಸ್ತ್ರ ಚಿಕಿತ್ಸೆಯನ್ನು ಅಚ್ಚುತ್ ಪಂಡಿತ್ ಆಸ್ಪತ್ರೆ, ಕುಮಟಾದಲ್ಲಿ ಮಾಡಿಸಿರುತ್ತಾರೆ. ಸದರಿ ನೌಕರರು ಚಿಕಿತ್ಸೆ ಪಡೆದ ಆಸ್ಪತ್ರೆಯು ಖಾಸಗಿ ಆಸ್ಪತ್ರೆಯಾಗಿರುವುದರಿಂದ ಸದರಿ ವೈದ್ಯಕೀಯ ವೆಚ್ಚವನ್ನು ಭರಿಸಲು ಅವಕಾಶವಿರುವುದಿಲ್ಲ. ಸರ್ಕಾರದ ಸುತ್ತೋಲೆ ಕ್ರ.ಸಂ.: ಎಡಿಎಂ : 2003–04, ದಿನಾಂಕ : 31–01–2003ರ ಮತ್ತು ಕರ್ನಾಟಕ ವೈದ್ಯಕೀಯ ಹಾಜರಾತಿ ನಿಯಮಾವಳಿಗಳು 1963ರ ನಿಯಮ 31ರ ಪ್ರಕಾರ ಸರ್ಕಾರದ ವಿಶೇಷ ಮಂಜೂರಾತಿ ಪಡೆದು ವೈದ್ಯಕೀಯ ವೆಚ್ಚ ಮರು ಪಾವತಿ ಮಾಡಲು ಅವಕಾಶವಿರುತ್ತದೆ.

ಕಾರಣ, ಶ್ರೀ ಎ.ಜಿ. ನಾಯ್ಕ, ತಹಶೀಲ್ದಾರ್, ಯಲ್ಲಾಪುರ ಇವರು ತಮ್ಮ ಪತ್ನಿಯ ಗರ್ಭಕೋಶದ ಶಸ್ತ್ರ ಚಿಕಿತ್ಸೆಯ ಕುರಿತು ಖರ್ಚು ಮಾಡಿದ ವೈದ್ಯಕೀಯ ವೆಚ್ಚ ರೂ. 13,694–00 (ರೂಪಾಯಿ ಹದಿಮೂರು ಸಾವಿರದ ಆರುನೂರ ತೊಂಬತ್ತನಾಲ್ಕು ಮಾತ್ರ) ಮರು ಸಂದಾಯ ಮಾಡಲು ಪರಿಶೀಲಿಸಿ ಸಂಬಂಧಿಸಿದ ಅಧಿಕಾರಿ ತಹಶೀಲ್ದಾರ್, ಯಲ್ಲಾಪುರರವರಿಗೆ ಮಂಜೂರಾತಿ ನೀಡುವಂತೆ ಕೋರಿ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಓದಲಾದ ಕ್ರ.ಸಂ. (2) ದಿನಾಂಕ : 11–06–2008ರಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ಜಿಲ್ಲಾಧಿಕಾರಿಗಳ ಪ್ರಸ್ತಾವನೆ ಹಾಗೂ ಅದರೊಂದಿಗಿನ ವೈದ್ಯಕೀಯ ಮೂಲ ರಸೀದಿಯನ್ನು ಕಳುಹಿಸಿ ಶ್ರೀ ಎ.ಜಿ. ನಾಯ್ಕ ತಹಶೀಲ್ದಾರ್, ಯಲ್ಲಾಪುರ ಇವರ ಪತ್ನಿಯ ಗರ್ಭಕೋಶದ ಶಸ್ತ್ರ ಚಿಕಿತ್ಸೆಯ ಕುರಿತು ಎಷ್ಟು ಮೊತ್ತಕ್ಕೆ ಬಿಲ್ಲನ್ನು ಪಾವತಿಸಬಹುದು ಎಂಬ ಬಗ್ಗೆ ಮಾಹಿತಿಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರ.ಸಂ. (3) ದಿನಾಂಕ : 23–01—09ರಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ತಮ್ಮ ವರದಿಯಲ್ಲಿ ಸರ್ಕಾರದಿಂದ ಮಾನ್ಯತೆ ಪಡೆದ ಆಸ್ಪತ್ರೆಯಲ್ಲಿ ಚಿಕಿತ್ಸೆಯನ್ನು ಪಡೆದಿದ್ದರೆ ಅವರಿಗೆ ರೂ. 8,000–00 ಅರ್ಹತಾ ಮೊತ್ತವು ಪಾವತಿಯಾಗುತ್ತಿತ್ತು ಎಂದು ತಿಳಿಸುತ್ತಾ ಮೂಲ ಬಿಲ್ಲುಗಳನ್ನು ಹಾಗೂ ಓಚರ್‌ಗಳನ್ನು ಹಿಂತಿರುಗಿಸಿರುತ್ತಾರೆ. ನಂತರ, ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಶ್ರೀಯುತ ಎ.ಜಿ. ನಾಯ್ಕ, ತಹಶೀಲ್ದಾರ್ ಇವರು ಪತ್ನಿಯ ಚಿಕಿತ್ಸೆಯನ್ನು ಅಚ್ಚುತ್ ಪಂಡಿತ್ ಹಾಸ್ಪಿಟಲ್ ಕುಮುಟಾದ ಆಸ್ಪತ್ರೆಯಲ್ಲಿ ದಾಖಲಾಗಿ ಬಿಡುಗಡೆ ಹೊಂದಿರುವ ಡಿಸ್ಚಾರ್ಜ ಸಮ್ಮರಿ ಯನ್ನು ಪಡೆದು ಈ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ, ಸದರಿ ಚಿಕಿತ್ಸೆಯನ್ನು ರಾಜ್ಯದ ಸರ್ಕಾರಿ ಆಸ್ಪತ್ರೆಗಳಲ್ಲಿ ಪಡೆದಿದ್ದಲ್ಲಿ ತಗಲಬಹುದಾದ ವೆಚ್ಚಕ್ಕೆ ಸೀಮಿತಗೊಳಿಸಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 31 ರಿಂದ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 14ನ್ನು ಸಡಿಲಿಸಿ ಶ್ರೀ ಎ.ಜಿ. ನಾಯ್ಕ, ತಹಶೀಲ್ದಾರ್ ಇವರಿಗೆ

ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ವೈದ್ಯಕೀಯ ವೆಚ್ಚವನ್ನಾಗಿ ಮರುಪಾವತಿಸಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ : ಆರ್‌ಡಿ 210 ಎಎಸ್‌ಡಿ 2008, ಬೆಂಗಳೂರು, ದಿನಾಂಕ : 13ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎ.ಜಿ. ನಾಯ್ಕ ಹಿಂದಿನ ತಹಶೀಲ್ದಾರ್, ಯಲ್ಲಾಪುರ ಪ್ರಸ್ತುತ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಗಳೂರು ಇವರ ಪತ್ನಿಯ ಚಿಕಿತ್ಸೆಗಾಗಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 31 ರಿಂದ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 14ನ್ನು ಸಡಲಿಸಿ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ವೈದ್ಯಕೀಯ ವೆಚ್ಚವನ್ನಾಗಿ ಮರು ಪಾವತಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಸಿಆಸುಇ (ಸೇವಾ ನಿಯಮಗಳ–2) ಇವರ ಟಿಪ್ಪಣೆ ಸಂ: ಸಿಆಸುಇ 215 ಸೇನಿಎಫ್ 2009, ದಿನಾಂಕ : 29–08–2009 ಹಾಗೂ ಆರ್ಥಿಕ ಇಲಾಖೆ (ವೆಚ್ಚ–7/8) ಇವರ ಟಿಪ್ಪಣಿ ಸಂ : ಆಇ 958, ವೆಚ್ಚ–7/2009, ದಿನಾಂಕ : 23–10–2009ರ ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇ–3)

ಪಿ.ಆರ್.253

## ಕಂದಾಯ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಭಾರಿ ಮಳೆಯಿಂದ ಮೂಲಭೂತ ಸೌಕರ್ಯಗಳಿಗೆ ಆಗಿರುವ ಹಾನಿಗಳಿಗೆ ತುರ್ತು ದುರಸ್ತಿ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಮಂತ್ರಿಗಳ ಕಾರ್ಯಾಲಯದ ಪತ್ರ ಸಂಖ್ಯೆ : ಪಿಎಸ್‌ಸಿಎಂ/23/2010 ದಿನಾಂಕ : 02–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯಮಂತ್ರಿಗಳ ಕಾರ್ಯದರ್ಶಿಗಳು, ಯಾದಗಿರಿ ಜಿಲ್ಲೆಯ, ಗುರುಮಿಟಕಲ್ ಕ್ಷೇತ್ರದಲ್ಲಿ ಸಣ್ಣ ನೀರಾವರಿಗಾಗಿ 2.5 ಕೋಟಿ ಹಾಗೂ ಜಿಲ್ಲಾ ಪಂಚಾಯತ್ ಕಾಮಗಾರಿಗಳಿಗೆ ರೂ. 2.5 ಕೋಟಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಅನುದಾನ ಬಿಡುಗಡೆ ಮಾಡಲು ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 137 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ : 15ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಯಾದಗಿರಿ ಜಿಲ್ಲೆಯಲ್ಲಿ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತಿ ಇಲಾಖೆಯ ವ್ಯಾಪ್ತಿಯಲ್ಲಿ ಹಾನಿಗೊಂಡಿರುವ ಮೂಲಭೂತ ಸೌಕರ್ಯಗಳ ದುರಸ್ತಿಗಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 400.00 ಲಕ್ಷಗಳ (ರೂ. ನಾಲ್ಕು ನೂರು ಲಕ್ಷಗಳು ಮಾತ್ರ) ಅನುದಾನ ಯಾದಗಿರಿ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

2) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು ಮತ್ತು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾದಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಅಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಅದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 692 ವೆಚ್ಚ–7/2009 ದಿನಾಂಕ : 06–10–2009 ಹಾಗೂ ಎಫ್‌ಡಿ 59 ವೆಚ್ಚ –7/2010 ದಿ: 11–01–2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ,
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್.254

## ಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದಲ್ಲಿ ಹೈ–ಸೆಕ್ಯೂರಿಟಿ ನೋಂದಣಿ ಫಲಕಗಳು ಸಾರಿಗೆ ಆಯುಕ್ತರು ಆಹ್ವಾನಿಸಿ, ಅಂತಿಮಗೊಳಿಸಿ ಅವಾರ್ಡ್ ಮಾಡಿರುವ ಟೆಂಡರ್‌ಅನ್ನು ರದ್ದುಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :** 1) ಐ.ಎಫ್.ಬಿ ಸಂ. ಟಿ.ಆರ್.ಡಿ. 324 ಟಿಎಎಮ್ 2004, ದಿನಾಂಕ : 29–08–2005 ರಲ್ಲಿ ಆಹ್ವಾನಿಸಲಾದ ಹೆಚ್‌ಎಸ್‌ಆರ್‌ಪಿ ಟೆಂಡರ್

2) ದಿನಾಂಕ : 6–12–2008 ಕ್ಕೆ ಪತ್ರ ವ್ಯವಹಾರ ಅಂತ್ಯಗೊಂಡ ಸಾರಿಗೆ ಆಯುಕ್ತರವರ ಪತ್ರ ಸಂಖ್ಯೆ ಸಾಆ/ನೋ–1/ಪಿ.ಆರ್.–72/2001–02.

**ಪ್ರಸ್ತಾವನೆ :**

ಮೋಟಾರು ವಾಹನಗಳನ್ನು ಭಯೋತ್ಪಾದನೆ ಕೃತ್ಯಗಳಿಗೆ ಉಪಯೋಗಿಸದಂತೆ ತಡೆಯುವುದು; ಹತ್ಯೆ, ಕಳ್ಳತನ, ಅಪಹರಣ ಇತ್ಯಾದಿ ಅಪರಾಧಗಳನ್ನು ಎಸಗುವುದಕ್ಕೆ ವಾಹನಗಳ ಬಳಕೆಗೆ ಕಡಿವಾಣ ಹಾಕುವುದು ಮತ್ತು ಹೆಚ್ಚುತ್ತಿರುವ ವಾಹನಗಳ ಕಳ್ಳತನವನ್ನು ನಿರ್ಬಂದಿಸಲು ಹಾಗೂ ಸಾರ್ವಜನಿಕ ಸುರಕ್ಷತೆ ಹಾಗೂ ಭದ್ರತೆಯನ್ನು ಮೂಡಿಸಲು ತಾಂತ್ರಿಕ ಸಮಿತಿಯ ಶಿಫಾರಸ್ಸಿನ ಮೇರೆಗೆ ಕೇಂದ್ರ ಸರ್ಕಾರವು ಹೈ–ಸೆಕ್ಯೂರಿಟಿ ರಿಜಿಸ್ಟ್ರೇಷನ್ ಫಲಕ (HSRP) ಎಂಬ ಹೊಸ ವ್ಯವಸ್ಥೆಯನ್ನು ತಂದಿರುತ್ತದೆ. ಈ ಉದ್ದೇಶಕ್ಕಾಗಿ ಕೇಂದ್ರ ಮೋಟಾರು ವಾಹನ ನಿಯಮಗಳು, 1989 ರ ನಿಯಮ 50 ಕ್ಕೆ ಭಾರತ ಸರ್ಕಾರವು ತಿದ್ದುಪಡಿ ಮಾಡಿರುತ್ತದೆ.

ಕೇಂದ್ರ ಮೋಟಾರು ವಾಹನ ನಿಯಮಗಳು, 1989ರ ನಿಯಮ 50ರನ್ವಯ ನೋಂದಣಿ ಸಂಖ್ಯೆಯ ಫಲಕಗಳನ್ನು ಮೋಟಾರು ವಾಹನದ ಮುಂಭಾಗದಲ್ಲಿ ಮತ್ತು ಹಿಂಬದಿಯಲ್ಲಿ Motor Vehicle (New High Security Registration Plates) Order, 2001 ರಲ್ಲಿ ನಿರ್ದಿಷ್ಟಪಡಿಸಿರುವ ಮಾದರಿಯಂತೆ ಮತ್ತು Specifications/Standards ಗಳಂತೆ ಭದ್ರತಾ ಮಾಪನಗಳೊಂದಿಗೆ ಅನುಮೋದಿತ ಪರವಾನಗಿ ಫಲಕ ತಯಾರಕರು ಅಥವಾ ಡೀಲರುಗಳು ನೀಡುವ ಭದ್ರತಾ ಫಲಕಗಳ ಮೇಲೆ ಭದ್ರತಾ ಮಾಪನಗಳೊಂದಿಗೆ ನೋಂದಣಿ ಸಂಖ್ಯೆಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿಗಳಲ್ಲಿ ಅಳವಡಿಸುವುದಕ್ಕಾಗಿ ಸದರಿ ನಿಯಮಗಳನ್ವಯ Central Road Research Institute, New Delhi, ಇವರು ಅನುಮೋದಿಸಿರುವ ನಂಬರ್ ಪ್ಲೇಟ್ ತಯಾರಕರನ್ನು ಅಯ್ಕೆ ಮಾಡುವ– ಸಲುವಾಗಿ ಟೆಂಡರ್ ಕರೆಯುವ ಹಾಗೂ ಟೆಂಡರ್ ಅಂಗೀಕರಿಸುವ ಪ್ರಾಧಿಕಾರವಾದ ಸಾರಿಗೆ ಆಯುಕ್ತರು 15 ವರ್ಷಗಳ ಕಾಲ ಹೈ–ಸೆಕ್ಯೂರಿಟಿ ರಿಜಿಸ್ಟ್ರೇಷನ್ ಫಲಕಗಳನ್ನು ವಿತರಿಸಲು ಮತ್ತು ಅಳವಡಿಸಲು ಮೇಲೆ ಓದಲಾದ ಕ್ರಮಸಂಖ್ಯೆ (1) ರಲ್ಲಿ ಟೆಂಡರ್ ಆಹ್ವಾನಿಸಿರುತ್ತಾರೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999 ರನ್ವಯ M/s Shimnit Utsch Pvt. Ltd, Mumbai ಇವರು ಸಲ್ಲಿಸಿರುವ ಟೆಂಡರು ಅತಿ ಕಡಿಮೆಯಾಗಿತ್ತೆಂದು (L1) ಸಾರಿಗೆ ಆಯುಕ್ತರು ಅವರ ಪತ್ರ ಸಂಖ್ಯೆ CT/Regn-1/PR-72/01-02 ದಿನಾಂಕ : 19–01–2006 ರಂದು ಟೆಂಡರುದಾರರಿಗೆ ಒಪ್ಪಿಗೆ ಪತ್ರ ನೀಡಿದ್ದರು.

ಈ ಮಧ್ಯದಲ್ಲಿ M/s Shimnit Utsch Pvt. Ltd, ಕಂಪನಿಯ ಸದಸ್ಯರುಗಳು ಹಲವಾರು ಶಂಕಿತ ಕೃತ್ಯಗಳಲ್ಲಿ ತೊಡಗಿರುವುದಾಗಿ ಮತ್ತು ಈ ಸಂಸ್ಥೆಯು ನಿಗಧಿಪಡಿಸಿರುವ ಬೆಲೆ ಪಶ್ಚಿಮ ಬಂಗಾಳ ಹಾಗೂ ಇತರ ರಾಜ್ಯಗಳಿಗಿಂತ

ಮೂರು ಪಟ್ಟು ಹೆಚ್ಚಾಗಿದ್ದು, ಇಂತಹ ಒಂದು ಮಿತಿಮೀರಿದ ಬೆಲೆ ರಾಜ್ಯದಲ್ಲಿನ ವಾಹನ ಮಾಲೀಕರುಗಳಿಗೆ ಅತ್ಯಂತ ದುಬಾರಿಯಾಗುವುದಲ್ಲದೇ, ಈ ಟೆಂಡರ್ ಪಾರದರ್ಶಕತೆಯಿಂದ ಕೂಡಿರುವುದಿಲ್ಲವೆಂಬ ಬಗ್ಗೆ ಮತ್ತಿನ್ನಿತರ ಎಲ್ಲಾ ವಿಷಯಗಳ ಬಗ್ಗೆ ದಿನಾಂಕ : 28–07–2009 ರಂದು ನಡೆದ ಕರ್ನಾಟಕ ವಿಧಾನ ಮಂಡಲದ ಉಭಯಸದನಗಳಲ್ಲಿ ವಿವರವಾದ ಚರ್ಚೆ ನಡೆಯಿತು. ಸದನದಲ್ಲಿ ಜನಪ್ರತಿನಿಧಿಗಳು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಸರ್ಕಾರವು ಗಣನೆಗೆ ತೆಗೆದುಕೊಂಡು ರಾಜ್ಯದ ಜನತೆಯ ಹಿತದೃಷ್ಟಿಯಿಂದ ರಾಜ್ಯದಲ್ಲಿ HSRP ಅಳವಡಿಕೆಯಲ್ಲಿ ಜನತೆಗೆ ಅಧಿಕ ಆರ್ಥಿಕ ಹೊರೆ ಆಗದೆ ಇರದಂತೆ ಮತ್ತು ಅವರ ಸುರಕ್ಷತೆಯನ್ನು ಸಹ ಕಾಪಾಡುತ್ತಾ HSRP ಅಳವಡಿಕೆಯನ್ನು ಕೂಲಂಕುಷವಾಗಿ ಪರಿಶೀಲಿಸಲು ಸರ್ಕಾರವು ಒಪ್ಪಿರುತ್ತದೆ.

ಅದರಂತೆ, ದೇಶದ ಕೆಲವು ರಾಜ್ಯಗಳಲ್ಲಿ HSRP ಟೆಂಡರ್‌ನಲ್ಲಿ ಕರ್ನಾಟಕದಲ್ಲಿ ನಮೂದಿಸಿರುವ ಬೆಲೆಗಿಂತ ಕಡಿಮೆ ಬೆಲೆ ಇರುವುದರಿಂದ ಕರ್ನಾಟಕ ರಾಜ್ಯದ ಜನತೆಗೆ ಅಧಿಕ ಆರ್ಥಿಕ ಹೊರೆ ಆಗದೇ ಇರುವ ರೀತಿಯಲ್ಲಿ ಹಾಗೂ ಟೆಂಡರ್ ಅಂಗೀಕರಿಸುವ ಪ್ರಾಧಿಕಾರವಾದ ಸಾರಿಗೆ ಆಯುಕ್ತರು L1 ನ ಟೆಂಡರ್‌ನ್ನು ಅಂಗೀಕರಿಸುವ ಮೊದಲು ಕೆಟಿಪಿಪಿ ಆಕ್ಟ್ ಮತ್ತು ನಿಯಮಗಳನ್ನು ಸಂಪೂರ್ಣವಾಗಿ ಪಾಲಿಸಿದ್ದಾರೆಯೇ ಎಂಬುದರ ಬಗ್ಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ.

HSRP ಬಗ್ಗೆ security specification ಗಳನ್ನು Motor Vehicles ( New High Security registration Plates) Order, 2001 ರಲ್ಲಿನ ನಿಗದಿಗೊಳಿಸಿದ್ದು, ಇದು ದೇಶದ ಎಲ್ಲಾ ರಾಜ್ಯಗಳಿಗೂ ಒಂದೇ ರೀತಿ ಇರುತ್ತದೆ. ಪರಿಣಾಮವಾಗಿ HSRP ಅಳವಡಿಕೆಯ ಬಗ್ಗೆ ನಾಗರೀಕರು ನೀಡುವ ಬೆಲೆಯು ಹೆಚ್ಚು ಕಡಿಮೆ ಒಂದೇ ರೀತಿ ಇರಬೇಕಾಗುತ್ತದೆ. ರಾಜ್ಯದ ಜನತೆಯ ಸುರಕ್ಷತೆಯನ್ನು ಗಮನದಲ್ಲಿಟ್ಟುಕೊಂಡು ಅಧಿಕ ಅರ್ಥಿಕ ಹೊರೆಯಾಗದಂತೆ ರಾಜ್ಯದ ಜನತೆಯ ಹಿತರಕ್ಷಣೆಯನ್ನು ಕಾಪಾಡುವುದು ಸರ್ಕಾರದ ಕರ್ತವ್ಯವಾಗಿರುತ್ತದೆ.

ಕರ್ನಾಟಕದಲ್ಲಿ ಯಶಸ್ವಿ ಟೆಂಡರುದಾರರಾಗಿರುವ M/s Shimnit Utsch Pvt. Ltd, ಇವರು ನಮೂದಿಸಿದ ಬೆಲೆ ಇತರ ರಾಜ್ಯಗಳಿಗಿಂತ ಅತಿ ಹೆಚ್ಚಾಗಿರುತ್ತದೆ. ಇದರಿಂದಾಗಿ ರಾಜ್ಯದ ವಾಹನ ಮಾಲೀಕರಿಗೆ ಅಧಿಕ ಆರ್ಥಿಕ ಹೊರೆ ಉಂಟಾಗಿ ಅನ್ಯಾಯವಾಗುತ್ತದೆ.

ಈ ಪ್ರಕರಣದಲ್ಲಿ ಸಂಗ್ರಹಣೆಯ ಮೌಲ್ಯ 10.00 ಕೋಟಿ ರೂಗಳಿಗಿಂತ ಹೆಚ್ಚಿದ್ದು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000ರ ನಿಯಮ 10 (1) ರಲ್ಲಿ ಅಗತ್ಯಪಡಿಸಿರುವಂತೆ ಟೆಂಡರ್ ಆಹ್ವಾನಿಸುವ ಪ್ರಾಧಿಕಾರವಾದ ಸಾರಿಗೆ ಆಯುಕ್ತರು HSRP ಬಗ್ಗೆ ಟೆಂಡರ್ ಅನ್ನು ಇಂಡಿಯನ್ ಟ್ರೇಡ್ ಜರ್ನಲ್ ನಲ್ಲಿ ಪ್ರಕಟಿಸಿರುವುದಿಲ್ಲ. ಆದ್ದರಿಂದ ಸದರಿ ನಿಯಮ 10(1)ರ ಉಲ್ಲಂಘನೆಯಾಗಿರುತ್ತದೆ.

ಅಲ್ಲದೇ,–

ಟೆಂಡರ್ ಡಾಕ್ಯೂಮೆಂಟ್ ಪ್ರಕಾರ ಟೆಂಡರುದಾರರು 04 ಇತರ ದೇಶಗಳಲ್ಲಿ HSRP ಅಳವಡಿಕೆಯಲ್ಲಿ ಅನುಭವ ಹೊಂದಿರಬೇಕು. ಈ ಅಂಶವನ್ನು ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ದೃಢೀಕರಿಸಿಕೊಂಡಿರುವುದಿಲ್ಲ.

ಮುಂದುವರೆದು, Karnataka Government (Transaction of Business) Rules, 1977 ರನ್ವಯ 5.00 ಕೋಟಿ ರೂ.ಗಳಿಗಿಂತ ಮೇಲ್ಪಟ್ಟ ಕೆಲಸಗಳಿಗೆ ಸಚಿವ ಸಂಪುಟದ ಅಗತ್ಯತೆ ಇದೆ. ಟೆಂಡರ್ ಅಂಗೀಕರಿಸುವ ಪ್ರಾಧಿಕಾರವಾದ ಸಾರಿಗೆ ಆಯುಕ್ತರು ಇವರು ಸರ್ಕಾರದ ಅನುಮೋದನೆ ಪಡೆಯದೆನೇ M/s Shimnit Utsch Pvt. Ltd, ಇವರ ಟೆಂಡರ್‌ಗೆ ಅಂಗೀಕೃತ ಪತ್ರ ನೀಡಿದ್ದು ಸದರಿ ನಿಯಮಗಳ ಉಲ್ಲಂಘನೆ ಆಗಿರುತ್ತದೆ.

ಜನಪ್ರತಿನಿಧಿಗಳು ಕರ್ನಾಟಕ ವಿಧಾನ ಮಂಡಲದ ಉಭಯ ಸದನಗಳಲ್ಲಿ ರಾಜ್ಯ ಜನತೆಯ ಎಲ್ಲಾ ವಿಧದ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ರಾಜ್ಯದ ಜನತೆಗೆ ಅನ್ಯಾಯವಾಗದಂತೆ ಸರ್ಕಾರ ತೀರ್ಮಾನವನ್ನು ಕೈಗೊಳ್ಳಬೇಕೆಂದು ಒತ್ತಾಯಿಸಿರುವುದರಿಂದ, ಟೆಂಡರ್ ಅಂಗೀಕಾರ ಪ್ರಾಧಿಕಾರವು HSRP ಬಗ್ಗೆ ಟೆಂಡರ್‌ನ್ನು ಅಂಗೀಕರಿಸುವ ಪ್ರಕ್ರಿಯೆಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು 2000 ರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು ಹಾಗೂ ಆಗಿಂದಾಗ್ಗೆ ಹೊರಡಿಸಲಾದ ಸ್ಥಾಯಿ ಆದೇಶಗಳನ್ನು ಪಾಲಿಸದೇ ಇರುವುದರಿಂದ, ಹಾಗೂ M/s Shimnit Utsch Pvt. Ltd, ನಮೂದಿಸಿರುವ HSRP ದರ ಇತರೆ ರಾಜ್ಯಗಳಲ್ಲಿನ ಇರುವ ದರಗಳಿಗಿಂತ ಹೆಚ್ಚಿರುವುದರಿಂದ ರಾಜ್ಯದ ಜನತೆಗೆ ಅಧಿಕ ಆರ್ಥಿಕ ಹೊರೆ ಆಗುವುದರಿಂದ ಹಾಗೂ ಸರ್ಕಾರದ ಅನುಮೋದನೆ ಪಡೆಯದೇ ಟೆಂಡರ್ ಅಂಗೀಕರಿಸುವ ಪ್ರಾಧಿಕಾರವಾದ ಸಾರಿಗೆ ಆಯುಕ್ತರು ಟೆಂಡರ್ ಅಂಗೀಕೃತ ಪತ್ರ ನೀಡಿರುವುದರಿಂದ HSRP ಬಗ್ಗೆ ಆಹ್ವಾನಿಸಿದ ಟೆಂಡರ್‌ನ್ನು ರದ್ದುಗೊಳಿಸಿ ರೀ–ಟೆಂಡರ್ ಮಾಡಲು ಸರ್ಕಾರವು ನಿರ್ಧರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂ : ಸಾರಿಇ 324 ಸಾಇಪ, 2004 ಬೆಂಗಳೂರು, ದಿನಾಂಕ : 22ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯದಲ್ಲಿ ಮೋಟಾರು ವಾಹನಗಳಿಗೆ ಹೈ–ಸೆಕ್ಯೂರಿಟಿ ರಿಜಿಸ್ಟ್ರೇಷನ್ ಫಲಕ ಅಳವಡಿಕೆಯ ಬಗ್ಗೆ ಸಾರಿಗೆ ಆಯುಕ್ತರು ಐಎಫ್‌ಬಿ ಸಂಖ್ಯೆ : ಟಿಆರ್‌ಡಿ 324 ಟಿಎಎಮ್ 2004, ದಿನಾಂಕ : 29–08–2005 ರಲ್ಲಿ ಟೆಂಡರ್ ಅನ್ನು ಆಹ್ವಾನಿಸಿ, ಅಂತಿಮಗೊಳಿಸಿ ಆ ನಂತರ ಅಂಗೀಕರಿಸಲಾಗಿದ್ದ ಟೆಂಡರ್ ಅನ್ನು ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

ಮುಂದುವರೆದು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು, 2000 ಹಾಗೂ ಅದರಡಿ ಆಗಿಂದಾಗ್ಯೆ ಹೊರಡಿಸಲಾಗಿರುವ ಸ್ಥಾಯಿ ಆದೇಶಗಳನ್ನು ಅನುಸರಿಸಿ ರೀ–ಟೆಂಡರ್ ಕರೆಯಲು ಸಾರಿಗೆ ಆಯುಕ್ತರಿಗೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನರಸಿಂಹರಾಜು**
ಪೀಠಾಧಿಕಾರಿ (ಪ್ರ)
ಸಾರಿಗೆ ಇಲಾಖೆ,

ಪಿ.ಆರ್.255

## ENERGY SECRETARIAT

**Sub :** Change of company name from M/s BP Energy India Private Limited to M.s Green Infra Wind Energy Private Limited-reg.

**Read :**
1. Government Ordr No: DE 243 NCE 2002 dated : 5-3-2003.
2. Government Order No: EN 34 NCE 2007 dated 28-02-2007.
3. Government Order No: EN 380 NCE 2008 dated 15-12-2008.
4. Letter No : KRED/08/GIWEPL-BPEIPL/2009/12 dated : 1/6-1-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, permission has been accorded for implementation of 56.50 MW wind power capacity in favour of M/s Bellary Wind Power Pvt. Ltd. At Bellary and Davangere Districts.

In the Government Order read at (2) above, sanction has been accorded for enhancement of part capacity of 56.50 MW i.e. 10.00 MW to 23.10 MW in favour of M/s Bellary Wind Power Pvt. Ltd.

In the Government Order read at (3) above, sanction has been accorded for transfer of 23.10 MW wind power capacity in favour of M/s BP Energy India Pvt. Ltd. At Telagi, Algilavada and Duggavati villages of Davangere district.

The registrar of Companies, Maharastra, Mumbai has changed the company's name from M/s BP energy India Pvt. Ltd. To M/s Green Infra Wind Energy Private Limited vide CIN No : U23200MH 2005 PTC 153775 dated : 24-09-2009.

Therefore in the letter read at (4) above, the Managing Director, Karnataka Renewable Energy Development Limited, Bangalore has sent proposal to Government to change the company's name from M/s BP Energy India Private Limited to M/s Green Infra Wind Energy Private Limited.

The proposal has been examined in detail and issued the following Order :-

**GOVERNMENT ORDER NO. EN 9 NCE 2010, BANGALORE, DATED : 22ND JANUARY 2010**

Government accords approval for the change of company's name from M/s BP Energy India Private Limited to M/s Green Infra Wind Energy Private Limited.

The Government has reserved the power to Cancel/modify this Order.

The terms and conditions of the Government Order read at (1) above shall IPSO FACTO applicable.

By Order and in the name of the Governor of Karnataka,
**S.J. SAMPATH KUMAR**
Under Secretary to Government
Energy Department.

PR. 256

## ENERGY SECRETARIAT

**Sub :** Change of company name from M/s BP Energy India Private Limited to M/s Green Infra Wind Energy Private Limited-reg.

**Read :**
1. Government Ordr No: EN 244 NCE 2002 dated : 5-3-2003.
2. Government Order No: EN 373 NCE 2006 dated 1-9-2006.
3. Government Order No: EN 454 NCE 2007 dated 31-12-2007
4. Letter No : KRED/08/GIWEPL-BPEIPL/2009/13 dated : 1/6-1-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, Sanction has been accorded for implementation of 37.00 MW capacity Wind Power Project at Chitradurga and Tumkur district by M/s Chitradurga Wind Power Pvt. Limited..

In the Government Order read at (2) above, sanction has been accorded for the change of location enhancement of capacity from 37.00 MW to. 43.95 MW Wind Power project in favour of M/s Chitradurga Wind Power Pvt. Limited at Hosadurga town of Chitradurga district to Bharamasagar of Davangere district.

In the Government Order read at (3) above, sanction has been accorded for transfer of 37.95 MW wind power capacity in favour of M/s BP Energy India Pvt. Ltd. From M/s Chitradurga Wind Power Private Limited at Bharamasagar of Davangere District.

The registrar of Companies, Maharastra, Mumbai has changed the companys name from M/s BP energy India Pvt. Ltd. To M/s Green Infra Wind Energy Private Limited vide CIN No : U23200MH 2005 PTC 153775 dated : 24-09-2009.

Therefore in the letter read at (4) above, the Managing Director, Karnataka Renewable Energy Development Limited, Bangalore has sent proposal to Government for change of name of the company from M/s BP Energy India Private Limited to M/s Green Infra Wind Energy Private Limited.

The proposal has been examined in detail and issued the following Order :-

**GOVERNMENT ORDER NO. EN 10 NCE 2010, BANGALORE, DATED : 22ND JANUARY 2010**

Government accords approval for the change of company's name from M/s BP Energy India Private Limited to M/s Green Infra Wind Energy Private Limited.

The Government has reserved the power to Cancel/modify this Order.

The terms and conditions of the Government Order read at (1) above shall IPSO FACTO applicable.

By Order and in the name of the Governor of Karnataka,

**S.J. SAMPATH KUMAR**

PR. 257

Under Secretary to Government

Energy Department.

## ENERGY SECRETARIAT

**Sub :** Transfer of commissioned 4.2 MW wind power capacity in favour of M/s Nu Power Renewables Limited –reg.

**Read :**
1. Government Ordr No: DE 46 NCE 2000 dated : 17-07-2000.
2. O.M. No : KRED/08/STF/2002/1100 dated : 2-8-2002 from the Managing Director, Karnataka Renewable Energy Development Limited.
3. Letter No : KRED/08/STFCL-NUPower/2009/3933 dated : 26-11-2009/2-12-2009 received from the Managing Director, Karnataka Renewable Energy Development Limited, Bangalore.

....

**Preamble:**

In the Government order read at (1) above, sanction has been accorded for implementation of 81.60 MW capacity wind power project at Gopalpura., Mahadevanakatte, Horakere-devarapura villages, Jogimatti wind zone, Chitradurga District to M/s Enercon (India) Limited.

In the O.M. read at (2) above, permission was given for transfer of 4.2 MW wind power capacity to M/s Shriram Transport Finance Company Limited from M/s Enercon (India) Limited.

The managing Director, Karnataka Renewable Energy Development Limited, Bangalore in his letter read at (3) above has recommended for transfer of commissioned 4.2 MW wind power capacity in favour of M/s NuPower Renewables Limited from M/s Shriram Transport Finance Company Limited at Gudikere and Budipura village, Holalkere Taluk of Chitradurga District.

The proposal has been examined in detail and the following Orders are issued :-

**GOVERNMENT ORDER NO. EN 609 NCE 2009, BANGALORE, DATED : 22ND JANUARY 2010**

Government accords approval for transfer of commissioned 4.2 MW wind power capacity in favour of M/s Nu Power Renewables Limited from M/s Shriram Transport Finance Company Limited at Gudikere and Budipura village, Holalkere Taluk of Chitradurga District as detaileld below and subject to the following conditions :-

| Village Name | Taluk & District | Land Survey No. | Extent of area (Ha) | Wind turbine Generator's Numbers |
|---|---|---|---|---|
| Gudikere | Holalkere taluk in Chitradurga District | 1 | 0.508 | STFC-01, STFC-02, STFC-03, STFC-04 |
| Budipura | Holalkere taluk in Chitradurga District | 8 | 10.432 | STFC-05, STFC-06 &STFC-07 |

1 M/s NuPower Renewables Limited shall execute an agreement with Government within 45 (fortyfive) days from the date of issue of this Order.

2 PPA is assigned to BESCOM. BESCOM shall execute the PPA/Wheeling and Banking with M/s NuPower Renewables Limited within a period of one month from the date of agreement.

3 The Government has reserved the power to Cancel/modify this Order.

The other terms and conditions of the Government Order No: DE 46 NCE 2000 dated : 17-07-2000 shall IPSO FACTO applicable.

By Order and in the name of the Governor of Karnataka,

**S.J. SAMPATHKUMAR**

Under Secretary to Government

Energy Department.

PR. 258

## ಇಂಧನ ಸಚಿವಾಲಯ

**ವಿಷಯ :** ಮೆ: ಸಹ್ಯಾದ್ರಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ 0.16 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಸಹ್ಯಾದ್ರಿ–2/2009/1011 ದಿನಾಂಕ : 24/26–2–2009.

2) ದಿನಾಂಕ : 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಸಹ್ಯಾದ್ರಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಯಡೆಹಳ್ಳಿ ಗ್ರಾಮದ ಬಳಿ ಭದ್ರಾ ಆರ್.ಬಿ.ಸಿ. 22ನೇ ಡಿಸ್ಟ್ರಿಬ್ಯುಟರಿ 2 ಕಿ.ಮೀ. ಚೈನೇಜ್‌ನಲ್ಲಿ 0.16 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ : 23–10–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ಸಹ್ಯಾದ್ರಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ 0.16 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 190 ಎನ್‌ಸಿಇ 2009, ಬೆಂಗಳೂರು, ದಿನಾಂಕ : 21ನೇ ಜನವರಿ 2010**

ಮೆ: ಸಹ್ಯಾದ್ರಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಯಡೆಹಳ್ಳಿ ಗ್ರಾಮದ ಬಳಿ ಭದ್ರಾ ಆರ್.ಬಿ.ಸಿ 22ನೇ ಡಿಸ್ಟ್ರಿಬ್ಯೂಟರಿ 2 ಕಿ.ಮೀ. ಚೈನೇಜ್‌ನಲ್ಲಿ 0.16 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (**Weir-Longitude : $13^0$59'40" Latitude : $75^0$46'13" Power House-Longitude : $13^0$50'35" Latitude : $75^0$45'55"**) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2,3 ಮತ್ತ 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ ನೀರಾವರಿ /ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರು ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.259

## ಇಂಧನ ಸಚಿವಾಲಯ

**ವಿಷಯ :** ಮೆ: ಬನಶಂಕರಿ ಹೈಡ್ರೊ ಪವರ್ ಪ್ಲಾಂಟ್ ಇವರಿಗೆ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿಎಲ್/06/ಇಡಿಕನಿ/2009/989 ದಿನಾಂಕ : 22/25–2–2009. ಮತ್ತು ಸಂಖ್ಯೆ : ಕೆಆರ್‌ಇಡಿಎಲ್/06/ಇಡಿಕನಿ/2009/3080 ದಿನಾಂಕ : 14/19–9–2009
2) ದಿನಾಂಕ : 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಬನಶಂಕರಿ ಹೈಡ್ರೊ ಪವರ್ ಪ್ಲಾಂಟ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಕಳಸ ಹೋಬಳಿಯ ಇಡಿಕನಿ ಗ್ರಾಮದ ಬಳಿ ಹೆಮ್ಮಕ್ಕಿ ಹಳ್ಳಕ್ಕೆ ಅಡ್ಡಲಾಗಿ (ಭದ್ರಾ ನದಿಯ ಉಪ ನದಿ) 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ : 23–10–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ಬನಶಂಕರಿ ಹೈಡ್ರೊ ಪವರ್ ಪ್ಲಾಂಟ್ ಇವರಿಗೆ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 124 ಎನ್‌ಸಿಇ 2009, ಬೆಂಗಳೂರು, ದಿನಾಂಕ : 21ನೇ ಜನವರಿ 2010**

ಮೆ: ಬನಶಂಕರಿ ಹೈಡ್ರೊ ಪವರ್ ಪ್ಲಾಂಟ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಕಳಸ ಹೋಬಳಿಯ ಇಡಿಕನಿ ಗ್ರಾಮದ ಬಳಿ ಹೆಮ್ಮಕ್ಕಿ ಹಳ್ಳಕ್ಕೆ ಅಡ್ಡಲಾಗಿ (ಭದ್ರಾ ನದಿಯ ಉಪ ನದಿ) 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (**Weir Latitude - : 13$^0$14'04"N Longitude : 75$^0$27'29"E Power House –Latitude : 13$^0$15'12"N Longitude : 75$^0$27'23"E)** ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.
(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
(ಇ) ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.
(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ

ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ ನೀರಾವರಿ /ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.260

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ.& ಎ.ಎಸ್, ನಿಯೋಜನೆ ಮೇಲೆ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ), ಆರ್ಥಿಕ ಇಲಾಖೆ ಇವರ ನಿಯೋಜನಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :–**

1. ಅಧಿಸೂಚನೆ ಸಂಖ್ಯೆ: ಸಿಆಸುಇ 330 ಎಸ್‌ಜಿಒ 2007, ದಿನಾಂಕ:09–10–2007.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 330 ಎಸ್‌ಜಿಒ 2007, ದಿನಾಂಕ:16–04–2008.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 811 ಸಅಸೇ 2008, ದಿನಾಂಕ: 20–10–2008.
4. ಆರ್ಥಿಕ ಇಲಾಖೆಯ ಕಡತಸಂಖ್ಯೆ: ಆಇ 97 ಸಮಯ 2009.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ.&ಎ.ಎಸ್, ಅವರನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಈ

ಹುದ್ದೆಯಲ್ಲಿ ನಿಯೋಜನೆ ಮೇರೆಗೆ ಒಂದು ವರ್ಷದ ಅವಧಿಗೆ ನೇಮಿಸಲಾಗಿತ್ತು. ಅದರಂತೆ ಅವರು ದಿನಾಂಕ: 14–10–2007 ರಂದು ಸದರಿ ಹುದ್ದೆಯಲ್ಲಿ ಅಧಿಕಾರ ವಹಿಸಿಕೊಂಡರು. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಅಧಿಕಾರಿಯ ನಿಯೋಜನಾ ಅವಧಿಯನ್ನು ದಿನಾಂಕ: 15–10–2008 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಕಡತದಲ್ಲಿ ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ.& ಎ. ಎಸ್, ಅವರ ಸೇವೆಯು ಇನ್ನೂ ಆರ್ಥಿಕ ಇಲಾಖೆಗೆ ಅವಶ್ಯಕವಾಗಿರುವುದರಿಂದ ಅವರ ನಿಯೋಜನಾ ಅವಧಿಯನ್ನು ದಿನಾಂಕ: 15–10–2009 ರಿಂದ ಮತ್ತೆ ಒಂದು ವರ್ಷಕ್ಕೆ ಮುಂದುವರಿಸಲು ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 403 ಸಅಸೇ 2009, ಬೆಂಗಳೂರು, ದಿನಾಂಕ: 21ನೇ ಜನವರಿ 2010**

ಶ್ರೀಮತಿ. ಅನಿತಾ ಬಾಲಕೃಷ್ಣ, ಐ.ಎ.& ಎ.ಎಸ್. ನಿಯೋಜನೆ ಮೇಲೆ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ), ಆರ್ಥಿಕ ಇಲಾಖೆ ಇವರ ನಿಯೋಜನಾ ಅವಧಿಯನ್ನು ದಿನಾಂಕ: 15–10–2009 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 330 ಎಸ್‌ಜಿಜ 2007, ದಿನಾಂಕ: 16–04–2008 ರಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳು ಮುಂದುವರೆದ ಅವಧಿಗೂ ಅನ್ವಯವಾಗುತ್ತದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ:10–07–1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 212

**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

**ಸಹಕಾರ ಸಚಿವಾಲಯ**

ವಿಷಯ: ದಿನಾಂಕ:31.03.2010 ರೊಳಗೆ ನಡೆಸಬೇಕಾಗಿರುವ ದಿ ಆರ್ಝಾದ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಹುಬ್ಬಳ್ಳಿ ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

ಓದಲಾಗಿದೆ: 1) ಅಧ್ಯಕ್ಷರು, ಆರ್ಝಾದ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಹುಬ್ಬಳ್ಳಿ ಇವರ ಪತ್ರ ಸಂಖ್ಯೆ: ಎ2ಬಿ/84/09–10 ದಿನಾಂಕ: 19–12–2009

**ಪ್ರಸ್ತಾವನೆ:**

ದಿ ಆರ್ಝಾದ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಹುಬ್ಬಳ್ಳಿ ಇದರ ಸದಸ್ಯರು ಧಾರವಾಡ, ಹಾವೇರಿ ಹಾಗೂ ಗದಗ ಈ ಮೂರು ಜಿಲ್ಲೆಗಳಲ್ಲಿದ್ದು ಇತ್ತೀಚೆಗೆ ಜರುಗಿದ ನೆರೆಹಾವಳಿಯಿಂದಾಗಿ ಸಂಕಷ್ಟಕ್ಕೆ ಒಳಗಾಗಿ ಹೆಚ್ಚಿನ ಆರ್ಥಿಕ ತೊಂದರೆಯಿಂದ ನರಳುತ್ತಿದ್ದು, ಜನಜೀವನ ಅಸ್ತವ್ಯಸ್ತಗೊಂಡಿರುವುದಾಗಿಯೂ ಈಗಿನ ಆರ್ಥಿಕ ಸಂಕಟದ ಸಮಯದಲ್ಲಿ ಕರ್ನಾಟಕ ಸರ್ಕಾರ ನೆರೆಹಾವಳಿ ಸಂತ್ರಸ್ತರಿಗೆ ಶೀಘ್ರಗತಿಯಿಂದ ಪರಿಹಾರ ಕಲ್ಪಿಸುತ್ತಿದ್ದು ಜನರ ಪರಿಸ್ಥಿತಿ ಇನ್ನೂ ಸುಧಾರಿಸಬೇಕಾಗಿದ್ದು ಈ ಸಂಕಷ್ಟ ಪರಿಸ್ಥಿತಿಯಲ್ಲಿ ಸದಸ್ಯರ ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಿ ಬ್ಯಾಂಕಿನ ವಾರ್ಷಿಕ ಮಹಾಸಭೆಯನ್ನು ಮುಂದೂಡಿರುವುದಾಗಿಯೂ ತಿಳಿಸಿ ಮಾರ್ಚಿ 2010ರಲ್ಲಿ ನಡೆಯಬೇಕಾಗಿರುವ ಆಡಳಿತ ಸಮಿತಿಯ ಚುನಾವಣೆಯನ್ನು ಆರು ತಿಂಗಳ ಕಾಲ ಮುಂದೂಡಬೇಕೆಂದು ಮೇಲೆ ಓದಲಾದ (1) ರ ಪತ್ರದಲ್ಲಿ ಅಧ್ಯಕ್ಷರು, ದಿ ಆರ್ಝಾದ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ ಹುಬ್ಬಳ್ಳಿ ಇವರು ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 08 ಸಿಎಲ್ಎಂ 2010, ಬೆಂಗಳೂರು, ದಿನಾಂಕ 13.1.2010**

ಮೇಲಿನ ಪರಿಸ್ಥಿತಿಯಲ್ಲಿ ದಿ ಆರ್ಝಾದ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಹುಬ್ಬಳ್ಳಿ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಒ 47 ಸಿಎಲ್ಎಂ 2009, ದಿನಾಂಕ: 04.03.2009 ಅನ್ನು ಭಾಗಶ: ಮಾರ್ಪಡಿಸಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು 30.10.2010 ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:** ಪ್ರಕರಣ 28ಎ(4), 28ಎ (5), 28ಬಿ(2), 29ಎಫ್(4) ಮತ್ತು 39ಎ(2) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.10.2010 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.241

**(ಆರ್. ಎಸ್. ಹುಚ್ಚಾಚಾರಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

ವಿಷಯ: ಕುಮಾರಿ ಎಲ್. ಮೀನಾಕ್ಷಮ್ಮ, ಸಹಕಾರ ಸಂಘಗಳ ಲೆಕ್ಕಪರಿಶೋಧಕರು, ಸಹಾಯಕ ನಿರ್ದೇಶಕರ ಕಛೇರಿ, ಮೈಸೂರು ಇವರ ಜನ್ಮ ದಿನಾಂಕದ ತಿದ್ದುಪಡಿಗಾಗಿ ಮಂಡನಾಧಿಕಾರಿಯ ನೇಮಕ ಹಾಗೂ ಪ್ರಕರಣದ ವಿಚಾರಣೆಗೆ ಆದೇಶಿಸುವ ಕುರಿತು.

ಓದಲಾಗಿದೆ: ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಲೆಕ್ಕ 1/ಎಲ್.ಮೀ/ಜ.ದಿ.ಬ.249/2008–09 ದಿನಾಂಕ: 27–01–2009.

**ಪ್ರಸ್ತಾವನೆ :**

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಮೇಲೆ ಓದಲಾದ ತಮ್ಮ ಪ್ರಸ್ತಾವನೆಯಲ್ಲಿ ಕುಮಾರಿ ಎಲ್.ಮೀನಾಕ್ಷಮ್ಮ ಇವರು ಇಲಾಖೆಯ ಲೆಕ್ಕಪರಿಶೋಧಕರ ಹುದ್ದೆಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡು ಅವರ ಕಛೇರಿ ಆದೇಶ ಸಂಖ್ಯೆ 4: ಸಿಬ್ಬಂದಿ–2/ನೇಮಕಾತಿ/43/2007–08 ದಿನಾಂಕ 19–05–2008ರನ್ವಯ ಮೈಸೂರು ಉಪ ವಿಭಾಗ, ಮೈಸೂರು ಕಛೇರಿಗೆ ನಿಯುಕ್ತಿ ಹೊಂದಿ ದಿನಾಂಕ 23–05–2008 ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿದ್ದು, ದಿನಾಂಕ 08–09–2008ರ ಮನವಿಯಲ್ಲಿ ಅವರ ಜನ್ಮ ದಿನಾಂಕ ಬದಲಾವಣೆಗೆ ಮನವಿಯನ್ನು ಸಲ್ಲಿಸಿರುತ್ತಾರೆ.

The Karnataka State Servants (Determination of Age) Act 1974 ರ ಕಲಂ 3(2) ರಂತೆ ಕುಮಾರಿ ಎಲ್.ಮೀನಾಕ್ಷಮ್ಮ ಇವರ ಎಸ್.ಎಸ್.ಎಲ್.ಸಿ ಅಂಕ ಪಟ್ಟಿಯಲ್ಲಿನ ಜನ್ಮ ದಿನಾಂಕವನ್ನಾಧರಿಸಿ ಇವರು ಕೆಲಸಕ್ಕೆ ಸೇರಿದಾಗ ಸೇವಾ ಪುಸ್ತಕದಲ್ಲಿ ಇವರ ಜನ್ಮ ದಿನಾಂಕವನ್ನು 1–9–1971 ಎಂದು ದಾಖಲಿಸಿ ಅಂಗೀಕರಿಸಿದೆ. ಆದರೆ ಕುಮಾರಿ ಎಲ್.ಮೀನಾಕ್ಷಮ್ಮ ರವರು ದಿನಾಂಕ 8–9–2008 ರ ಮನವಿಯೊಂದಿಗೆ ಸಲ್ಲಿಸಿರುವ CSI Worth Memorial Hospital, Mysore ಇವರ ದಿನಾಂಕ 24–10–2008 ರ ಪತ್ರ ಹಾಗೂ ಜನನ ಪ್ರಮಾಣ ಪತ್ರದ ದೃಢೀಕೃತ ಪ್ರತಿ ಮತ್ತು ಮೈಸೂರು ಮಹಾನಗರ ಪಾಲಿಕೆ ಇವರ ದಿನಾಂಕ 3–8–2007 ಕ್ಕೆ ಇತ್ತಿರುವ ಜನನ ಪ್ರಮಾಣ ಪತ್ರ ಇವುಗಳಿಂದ ಇವರ ಜನ್ಮ ದಿನಾಂಕ 14–12–1973 ರಂದು ಇರುತ್ತದೆ. ಮೇಲ್ಕಂಡ ಕಾಯ್ದೆಯ ಕಲಂ 5 ರಂತೆ ಸೇವೆಗೆ ಸೇರಿದ ಮೂರು ವರ್ಷಗಳ ಒಳಗೆ ಸರ್ಕಾರಿ ನೌಕರರು ಸೇವಾ ಪುಸ್ತಕದಲ್ಲಿ ದಾಖಲಿಸಿ ಅಂಗೀಕೃತಗೊಂಡ ಜನ್ಮ ದಿನಾಂಕದ ಬದಲಾವಣೆಗೆ ಮನವಿ ಸಲ್ಲಿಸಬಹುದೆಂದು ಈ ಕಲಂನ ಉಪ ಕಲಂ(3)ರಂತೆ ಸರ್ಕಾರವು ಈ ಕುರಿತು ಪರಿಶೀಲಿಸಿ ತಪಾಸಣೆ ಕೈಗೊಳ್ಳಲು ಅಧಿಕಾರಿಯನ್ನು ನೇಮಿಸಿ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂತಲೂ ಹಾಗೂ ಉಪ ಕಲಂ(4) ರಂತೆ ಈ ರೀತಿ ನೇಮಕಗೊಂಡ ಅಧಿಕಾರಿಗೆ ಸಿವಿಲ್ ನ್ಯಾಯಾಲಯದ ಅಧಿಕಾರ ಇರುತ್ತದೆಂದು ಹಾಗೂ ಸಂಬಂಧಪಟ್ಟ ಸರ್ಕಾರಿ ನೌಕರರು ಈ ಅಧಿಕಾರಿಗಳು ಸೂಚಿಸಿದ ದಾಖಲೆಗಳನ್ನು ಪರಿಶೀಲನೆಗೆ ಒದಗಿಸಬೇಕೆಂದಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಪರಿಶೀಲನೆಗೆ ಸಲ್ಲಿಸಲಾಗಿ, ಸದರಿ ಅಂಶದ ಬಗ್ಗೆ ಸುಧೀರ್ಘವಾದ ವಿಚಾರಣೆಯನ್ನು ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿಗಳು ಕಾನೂನು ಇಲಾಖೆ ಇವರು The Karnataka State Servants (Determination of Age) Act 1975 ರನ್ವಯ ಮಾಡಬೇಕಾಗಿರುವುದರಿಂದ ಸಹಕಾರ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ಶ್ರೀಧರ್ ಗೋಪಾಲ ಕೃಷ್ಣಭಟ್, ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯಗಳು) ಕಾನೂನು ಇಲಾಖೆ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲು ಸೂಚಿಸಿದೆ.

ಆದ್ದರಿಂದ ಪ್ರಕರಣದ ವಿಚಾರಣೆಗೆ ಹಾಗೂ ಸಹಕಾರ ಇಲಾಖೆಯ ಪರವಾಗಿ ವಾದ ಮಂಡಿಸುವ ಸಲುವಾಗಿ ಮಂಡನಾಧಿಕಾರಿಯನ್ನು ನೇಮಕ ಮಾಡಲು ಈ ಬಗ್ಗೆ ಕಾನೂನು ಇಲಾಖೆಯೊಡನೆ ಸಮಾಲೋಚಿಸಿ, ಈ ಮುಂದಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 32 ಎಲೆಸೇ 2008 ಬೆಂಗಳೂರು, ದಿನಾಂಕ: 13ನೇ ಜನವರಿ 2010.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಕುಮಾರಿ ಎಲ್. ಮೀನಾಕ್ಷಮ್ಮ, ಸಹಕಾರ ಸಂಘಗಳ ಲೆಕ್ಕಪರಿಶೋಧಕರು ಸಹಾಯಕ ನಿರ್ದೇಶಕರ ಕಛೇರಿ, ಮೈಸೂರು ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮದ 1974ರ ನಿಯಮ 5 ರ ಉಪನಿಯಮ 1ರನ್ವಯ ತಿದ್ದುಪಡಿ ಮಾಡುವ ಸಲುವಾಗಿ ಸದರಿ ಅಧಿನಿಯಮದ 5ರ ಉಪನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ವಿಚಾರಣಾಧಿಕಾರಿಗಳ ಮುಂದೆ ಸಹಕಾರ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ಶ್ರೀಧರ್ ಗೋಪಾಲ ಕೃಷ್ಣಭಟ್, ಸರ್ಕಾರದ ಅಧೀನ ಕಾರ್ಯದರ್ಶಿ (ವಾಜ್ಯಗಳು), ಕಾನೂನು ಇಲಾಖೆ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ ಪ್ರಕರಣದ ವಿಚಾರಣೆಗೆ ಆದೇಶಿಸಿದೆ.

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅ.ಟಿ.ಸಂಖ್ಯೆ: ಲಾ 129 ಅ.ಬಿ/2009 ದಿನಾಂಕ 20–03–2009 ಹಾಗೂ ಲಾ: 09 ಜದಿವಿ 2009 ದಿನಾಂಕ 20–04–2009 ಹಾಗೂ ಕಾನೂನು ಇಲಾಖೆ ಟಿಪ್ಪಣಿ ಸಂಖ್ಯೆ: 656/09 ದಿನಾಂಕ 19/25–12–2009 ರನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.242

**( ನಂಜುಂಡಪ್ಪ )**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ